ಮಿಂಚಿನಬಳ್ಳಿಯ ೧೮ನೇ ವರ್ಷದ ೨ನೇ ಕುಡಿ

# ಬೇಲೂರು-ಹಳೇಬೀಡುಗಳ ಕೈಪಿಡಿ

ಲೇಖಕರು :
ಎಸ್. ಅನಂತಾಚಾರ್ಯ
B. A. (Hons)

ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ

೧೫ನೇ ಫೆಬ್ರುವರಿ ೧೯೫೬

ಉತ್ತಮ ಪ್ರತಿ
೧—೦—೦

ಸಾದಾ ಪ್ರತಿ
೦—೧೨—೦

ಸಂಪಾದಕರು :
ಬುರ್ಲಿ ಬಿಂದುಮಾಧವ
ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ



---

**ಮುಂಬರಲಿರುವ ಪುಸ್ತಕಗಳು**

೧ ಯಕ್ಷಗಾನ ಸಾಹಿತ್ಯ
೨ ಪ್ರಸನ್ನ ವೆಂಕಟದಾಸರು
೩ ಭಾರತದ ರಾಜಕಾರಣ
೪ ಶ್ರೀ ಬೇಂದ್ರೆಯವರು

ಇತ್ಯಾದಿ

---

ಮೊದಲ ಮುದ್ರಣ : ೧೯೫೬

ಮುದ್ರಕರು :
ಕೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ,
ಧಾರವಾಡ

# ವಾಚಕರಲ್ಲಿ ಬಿನ್ನಹ

ಬೇಲೂರು ಹಾಗು ಹಳೇಬೀಡುಗಳ ಕೈಪಿಡಿಯು ಈ ವರ್ಷದ ೨ನೇ ಕುಡಿಯಾಗಿ ಪ್ರಕಟವಾಗುತ್ತಲಿದೆ. ಮಿಂಚಿನಬಳ್ಳಿಯಲ್ಲಿ ತೀರ ಚಿಕ್ಕದಾದ ಹೊತ್ತಿಗೆಯೆಂದರೆ ಇದು. ವಾಚಕರು ಇದನ್ನು ನೋಡಿ ಆಶ್ಚರ್ಯಚಕಿತ ರಾಗಬಹುದು. ಆದರೆ ಡಾ| ಕೆ. ಎಂ ಕೃಷ್ಣರಾವ *M. A.P. H D.* ಇವರಿಂದ ಬರೆಯಲ್ಪಟ್ಟ 'ಯಕ್ಷಗಾನ ಸಾಹಿತ್ಯ'ವೆಂಬ ಗ್ರಂಥವು ಎರಡನೇ ಕುಡಿ ಯಾಗಿಯೇ ವಾಚಕರ ಕೈ ಸೇರುವದು.

ಕರ್ನಾಟಕದಲ್ಲಿ ಸುಪ್ರಸಿದ್ಧವಾದ ಅನೇಕ ಐತಿಹಾಸಿಕ ಸ್ಥಳಗಳ ಸಂದ ರ್ಶನಕ್ಕಾಗಿ ಹೋಗುವ ವಿದ್ಯಾರ್ಥಿಗಳಿಗೆ ಹಾಗೂ ಜನರಿಗೆ ಅನುಕೂಲವಾಗು ವದಕ್ಕಾಗಿ ಇಂತಹ ಪರಿಚಯಾತ್ಮಕ ಪ್ರಕಟನೆಗಳನ್ನು ಪ್ರಕಟಿಸುವದು ಬಳ್ಳಿಯ ಯೋಜನೆಗಳಲ್ಲಿ ಒಂದಾಗಿದೆ ಆ ಯೋಜನೆಯಲ್ಲಿಯ ಮೊದಲನೆಯ ಪುಸ್ತಕವಿದು. ನೋಟಕರಿಗೆ ಆಯಾ ಸ್ಥಳಗಳಲ್ಲಿ ಏನು ನೋಡಬೇಕು? ಹೇಗೆ ನೋಡಬೇಕು? ಐತಿಹಾಸಿಕ ಮಹತ್ವವೇನು? ಕ್ಷೇತ್ರದ ಮಹಾತ್ಮ್ಯ ವೇನು? ಎಂಬುದನ್ನು ತಿಳಿದುಕೊಂಡು ಆ ಸ್ಥಳಗಳನ್ನು ಸಂದರ್ಶಿಸಿದರೆ ಹೊಸದೃಷ್ಟಿಯುಂಟಾಗಿ ಒಂದು ಬಗೆಯ ಆನಂದವನ್ನು ಸವಿಯಲು ಅನು ಕೂಲವಾಗುವದೆಂಬುದೇ ಈ ಪ್ರಕಟಣೆಗಳ ಉದ್ದೇಶವು. ಶ್ರೀ. ಎನ್. ಅನಂತಾ ಚಾರ್ಯರು ಉತ್ಸಾಹಿ ತರುಣರು. ಬೇಲೂರೇ ಅವರ ಜನ್ಮಭೂಮಿ. ಜಗ ತ್ತಿನ ಚಿತ್ತವನ್ನೇ ಆಕರ್ಷಿಸುವ ಬೇಲೂರಿನ ಶಿಲ್ಪಕಲೆಯು ಅವರನ್ನು ಬೆರಗು ಗೊಳಿಸದೆ ಇದ್ದೀತೇ? ಅವರು ಒಳ್ಳೇ ಅಭಿಮಾನದಿಂದ ಈ ಗ್ರಂಥ ಬರೆ ಯಲು ಉತ್ಸಾಹಿತರಾಗಿದ್ದಾರೆ. ಅವರ ಈ ಪ್ರಕಟನೆಯು ಕನ್ನಡಿಗರಿಗೆಲ್ಲ ಅತ್ಯಂತ ಉಪಯುಕ್ತವಾಗುವದೆಂದು ಬಗೆದಿದ್ದೇನೆ. ಇತ್ತೀಚೆಗೆ ಭಾರತದಲ್ಲಿ ಇಂತಹ ಐತಿಹಾಸಿಕ ಸ್ಥಳಗಳನ್ನು ನೋಡುವ ಉಪಕ್ರಮವು ಹೆಚ್ಚಾಗಿ ಪ್ರಾರಂಭವಾಗಿದೆ. ವಿದ್ಯಾರ್ಥಿಗಳು ಇಂತಹ ಕೈಪಿಡಿಗಳಿಂದ ಹೆಚ್ಚಿನ ಜ್ಞಾನವನ್ನು ಪಡೆಯಲು ಸಹಾಯಕವಾಗುವದು. ಈ ದೃಷ್ಟಿಯಿಂದ ವಿದ್ಯಾ ರ್ಥಿಗಳು ಇದರ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರೆಂದು ನಂಬಿದ್ದೇನೆ.

ಬಳ್ಳಿಯು ಆರ್ಥಿಕಸ್ಥಿತಿಯ ಬಗೆಗೆ ಹೆಚ್ಚಿಗೆ ಬರೆಯಲು ಅಪೇಕ್ಷಿಸುವದಿಲ್ಲ. ವಾಚಕರು ಇಲ್ಲಿಯ ವರೆಗಿನ ಅನುಭವದಿಂದ ಕನ್ನಡ ನಾಡಿನ ಹಾಗೂ ಭಾರತ ರಾಷ್ಟ್ರದ ದೃಷ್ಟಿಯಿಂದ ಎಂಥ ಗ್ರಂಥಗಳು ಬೇಕೆಂಬುದನ್ನು ತಿಳುಹಿಸಬೇಕಾಗಿ ಬಿನ್ನವಿಸಿಕೊಳ್ಳುತ್ತೇನೆ. ಆ ಬಗೆಯ ಗ್ರಂಥಗಳ ಯೋಜನೆಯನ್ನು ಮುಂದಿನ ವರ್ಷ ಅರ್ಥಾತ್ ನವಕರ್ನಾಟಕದ ಜನ್ಮದಿನದಿಂದಲೇ ಕೈಕೊಳ್ಳಲಾಗುವದು. ಈ ರಾಷ್ಟ್ರೀಯ ಉದ್ಯಮದಲ್ಲಿ ಎಲ್ಲರೂ ಸಹಕರಿಸಬೇಕಾಗಿ ಬಿನ್ನವಿಸುತ್ತೇನೆ.

ತಮ್ಮ ಸೇವಕ

ಧಾರವಾಡ
೧೫—೨—೧೯೫೬

**ಬುರ್ಲಿ ಬಿಂದುಮಾಧವ**

---

# ಪೀಠಿಕೆ

ಮಿಂಚಿನಬಳ್ಳಿಯಲ್ಲಿ ೧೯೪೮ ನೆ ಇಸವಿ ಆಗಸ್ಟ್ ತಿಂಗಳಲ್ಲಿ 'ಏಶಿಯಾ ಜನಾಂಗಗಳ ಪ್ರಾಚೀನ ನಾಗರಿಕತೆಗಳು' ಎಂಬ ಪುಸ್ತಕವನ್ನು ಪ್ರಕಟಪಡಿಸಿ ನನ್ನ ಬರವಣಿಗೆಗೆ ಪ್ರೋತ್ಸಾಹ ಕೊಟ್ಟಿರುವ ಶ್ರೀ ಬುರ್ಲಿ ಬಿಂದುಮಾಧವ ರವರಿಗೆ ನಾನು ತುಂಬಾ ಉಪಕೃತನಾಗಿದ್ದೇನೆ. ಪುನಃ ಅವರ ಪ್ರೋತ್ಸಾಹ ದಿಂದ ಬೇಲೂರು ಮತ್ತು ಹಳೇಬೀಡು ದೇವಾಲಯಗಳ ವಿಚಾರವಾಗಿ ಬರೆದಿರುವ ಪುಸ್ತಕವನ್ನು ಓದುಗರ ಮುಂದಿಡಲು ಸಾಧ್ಯವಾಗಿದೆ. ಈ ಚಿಕ್ಕ ಪುಸ್ತಕವು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಕೆಲವು ಆಧಾರಗಳಿವೆ

ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಇತಿಹಾಸದ ಪ್ರಾಧ್ಯಾಪಕರೂ ಆರ್ಕಿಯಲಾಜಿಕಲ್ ಇಲಾಖೆಯ ಡೈರೆಕ್ಟರರೂ ಆಗಿದ್ದ ಕೀರ್ತಿಶೇಷರಾದ ಡಾ|| ಎಂ. ಹೆಚ್ ಕೃಷ್ಣಾ, ಎಂ. ಎ. ಡಿ, ಲಿಟ್ ಅವರಿಂದಲೂ ಮತ್ತು ಬೇಲೂರಿನ ಜಮೀನ್ದಾರರೂ ಅರ್ಚಕರೂ ಆಗಿದ್ದ ಲೇಟ್ ಮುತ್ತುಭಟ್ಟ ರವರಿಂದಲೂ (ನರಸಿಂಹ ಐಯ್ಯಂಗಾರ್ರೆಂದು ಹೆಸರು) ದೇವಸ್ಥಾನದ ಅನೇಕ ಚಿತ್ರ, ಚಾರಿತ್ರ್ಯಗಳನ್ನು ವಿಮರ್ಶೆಯಿಂದ ಸಂಗ್ರಹಿಸಿರುವ ನನ್ನ ಪೂಜ್ಯ ತಂದೆಯವರಾದ ಬೇಲೂರು ಉಪಾಧ್ಯ ನಾಗಪ್ಪಾಚಾರ್ಯರವರಿಂದಲೂ ತಿಳಿದ ಭಾಗವನ್ನು ಈ ಚಿಕ್ಕ ಪುಸ್ತಕದಲ್ಲಿ ಅಳವಡಿಸಿದ್ದೇನೆ. ಅನೇಕ ವಿಚಾರ ಗಳನ್ನು ಕೆಲವು ಪುಸ್ತಕಗಳ, ಲೇಖನಗಳ ಆಧಾರದ ಮೇಲೆ ಬರೆಯಲಾಗಿದೆ. ಸ್ವತಃ ದೇವಾಲಯಗಳನ್ನು ಅನೇಕಬಾರಿ ನೋಡಿ ತಿಳಿದಿದ್ದರಿಂದಲೂ ಬರ ವಣಿಗೆ ಮುಂದುವರಿದಿದೆ. ಮೈಸೂರು ಆರ್ಕಿಯಲಾಜಿಕಲ್ ಇಲಾಖೆಯ ಕೈಪಿಡಿಗಳನ್ನು ಕೂಡ ನೋಡಲಾಗಿದೆ. ಆದರೆ ಯಾವುದೊಂದು ಪುಸ್ತಕ ದಲ್ಲಿಯೂ ಸಂಪೂರ್ಣವಾದ ವಿವರ ದೊರೆಯದೆ ಅಪೂರ್ಣವಾಗಿದೆ.

ಈ ಪುಸ್ತಕದಲ್ಲಿ ಕೂಡ ಹಳೇಬೀಡಿಗೆ ಸಂಬಂಧಪಟ್ಟ ವಿವರಗಳೆಲ್ಲ ವನ್ನೂ ಅಳವಡಿಸಿಲ್ಲ. ಅಂತೆಯೇ ಅಲ್ಲಿನ ಹಾಗೂ ಬೇಲೂರಿನ ಚಿತ್ರಗಳ ಬ್ಲಾಕುಗಳು ಎಲ್ಲವೂ ಇಲ್ಲ. ಮುಂದಿನ ಮುದ್ರಣದಲ್ಲಿ ಈ ಲೋಪಗಳನು

ಸರಿಪಡಿಸಲಾಗುವುದು. ಅಭಿಪ್ರಾಯ ವ್ಯತ್ಯಾಸವಿದ್ದಲ್ಲಿ ಅವನ್ನೂ ಕೂಡ ತಿದ್ದಿಕೊಳ್ಳಲಾಗುವುದು.

ಮುಖ್ಯವಾಗಿ ಕನ್ನಡದಲ್ಲಿ ಜಗತ್ಪ್ರಸಿದ್ಧವಾದ ಬೇಲೂರು--ಹಳೇಬೀಡು ದೇವಾಲಯಗಳ ಕೈಪಿಡಿ ಇಲ್ಲವೆಂಬ ಕೊರತೆ ನಿವಾರಣೆಯಾಗಲೆಂದು ಈ ಕೆಲಸ ಕೈಗೊಂಡದ್ದಾಗಿದೆ ಈ ಪುಸ್ತಕವನ್ನು ಬರೆಯಲು ಅನೇಕ ಮಹನೀಯರು ಸಹಕಾರ ನೀಡಿರುತ್ತಾರೆ

ಮೈಸೂರಿನಲ್ಲಿ ಆರ್ಕಿಯಲಾಜಿಕಲ್ ಇಲಾಖೆಯಲ್ಲಿ ಆಕ್ಟಿಂಗ ಡೈರೆಕ್ಟರ ಆಗಿ ಕೆಲಸಮಾಡಿರುವ ಹಾಲಿ ರಜಾದಲ್ಲಿರುವ ಶ್ರೀ ಕೆ. ನಾರಾಯಣ ಅಯ್ಯಂಗಾರ್ಯರು ಎಂ. ಎ. ಅವರು ಕರಡು ಪುಸ್ತಕವನ್ನು ಓದಿ ಸೂಕ್ತ ಬದಲಾವಣೆ ಮಾಡುವ ಬಗ್ಗೆ ಅಮೂಲ್ಯವಾದ ಸಲಹೆ ಕೊಟ್ಟಿರುತ್ತಾರೆ. ಅವರಿಗೆ ನಾನು ಉಪಕೃತನಾಗಿದ್ದೇನೆ. ಮತ್ತು ಬೇಲೂರಿನ ಶ್ರೀ ಕೊಂಡಿ ಕೇಶವಾಚಾರ್ಯರು (ಅರಮನೆ ಪಂಡಿತರೆಂದು ಹೆಸರುವಾಸಿಯಾಗಿದ್ದ ವಿದ್ವಾನ್ ಕೊಂಡೀ ನಾರಾಯಣಾಚಾರ್ಯರ ಮಕ್ಕಳು) ಕೃಷ್ಣಾ ಸ್ಟೋರ್ಸಿನ ಶ್ರೀ ಪದ್ಮನಾಭ ಶೆಟ್ಟರು ಕೆಲವು ಫೋಟೋಗಳನ್ನು ಒದಗಿಸಿಕೊಟ್ಟಿರುತ್ತಾರೆ ಮತ್ತು ಸುಂದರವಾಗಿ ಬ್ಲಾಕುಗಳನ್ನು ತಯಾರ್ಮಾಡಿಸಿ ಕೊಟ್ಟ ಬೆಂಗಳೂರು ಫೋಟೋ ಸ್ಟೋರ್ಸಿನ ಶ್ರೀ ಜೀ. ಕೆ. ವೇಲಿ ಮತ್ತು ಕಂಪೆನಿಯವರಿಗೆ ನಾನು ಆಭಾರಿಯಾಗಿದ್ದೇನೆ

ಕನ್ನಡಿಗರಿಂದ ಈ ಪುಸ್ತಕಕ್ಕೆ ಸಾಕಷ್ಟು ಪ್ರೋತ್ಸಾಹ ದೊರೆಯುವುದೆಂದು ನಂಬಿದ್ದೇನೆ.

ಬೇಲೂರು
೧೫-೨-೧೯೫೬

ಎನ್. ಅನಂತಾಚಾರ್ಯ

---



The Image of God Keshava
ದಿವ್ಯಾಭರಣಗಳಿಂದಲೂ ವಸ್ತ್ರಗಳಿಂದಲೂ ಅಲಂಕೃತವಾದ
ಶ್ರೀಚೆನ್ನಕೇಶವ ದೇವರ ವಿಗ್ರಹ



The Image and the Parrot
ತನ್ನ ಮುದ್ದಿನ ಗಿಣಿಯನ್ನು
ಬಲಗೈ ಮೇಲೆ ಕೂಡಿಸಿಕೊಂಡಿರುವ ಮದನಿಕೆ

# ಬೇಲೂರಿನ ಕೈಸಿಡಿ

## ಭಾರತವು ಪುಣ್ಯಕ್ಷೇತ್ರಗಳ ಬೀಡು

ಭಾರತದಲ್ಲಿ ಅನೇಕ ಪುಣ್ಯ ವಿಶೇಷಗಳಿಂದಲೂ ಐತಿಹಾಸಿಕ ಹಿನ್ನೆಲೆಗಳಿಂದಲೂ ಕೂಡಿರುವ ಪ್ರೇಕ್ಷಣೀಯ ಸ್ಥಳಗಳಿವೆ ಉತ್ತರದಲ್ಲಿ ಹಿಮಾಚ್ಛಾದಿತವಾದ ಹಿಮಾಲಯ ಪರ್ವತಶ್ರೇಣಿಯು ವಿಶೇಷವಾದ ಪ್ರಕೃತಿ ಸಂಪತ್ತಿನಿಂದ ಕೂಡಿ ದೊಡ್ಡ ದೊಡ್ಡ ಜೀವನದಿಗಳ ಉಗಮಸ್ಥಾನವಾಗಿದೆ. ಹರಿದ್ವಾರ, ಬದರಿನಾಥ, ಕಾಶಿ, ಕುರುಕ್ಷೇತ್ರ, ಪ್ರಯಾಗ, ಅಯೋಧ್ಯಾ, ದ್ವಾರಕಾ, ಜಗನ್ನಾಥಪುರಿ ಮುಂತಾದ ಸ್ಥಳಗಳು ಯಾತ್ರಾರ್ಥಿಗಳಿಗೆ ಪಾಪ ವಿಮೋಚನೆಯ ಸ್ಥಳಗಳಾಗಿವೆ. ಹೀಗಾಗಿ ಅಖಂಡ ಭಾರತವೇ ಪುಣ್ಯ ಭೂಮಿಯೆನಿಸಿಕೊಂಡಿದೆ. ದಕ್ಷಿಣ ಭಾರತದ ಜನರು ಬದರೀನಾಥನ ದರ್ಶನಕ್ಕಾಗಿ, ತ್ರಿವೇಣೀ ಸಂಗಮದ ಸ್ನಾನಕ್ಕಾಗಿ, ಕಾಶಿಯಲ್ಲಿ ಗಂಗಾಸ್ನಾನಮಾಡಿ ವಿಶ್ವೇಶ್ವರನಿಗೆ ಅಭಿಷೇಕ ಮಾಡಲು ಹೋಗಿ ಬರುತ್ತಿರುವುದು ಸಂಪ್ರದಾಯಾನುಸಾರವಾಗಿ ಜೀವಮಾನವನ್ನು ನಡೆಸುತ್ತಿರುವವರ ಜೀವಿತದ ಒಂದು ಮಹತ್ವಾಕಾಂಕ್ಷೆಯಾಗಿರುವಂತೆಯೇ ದಕ್ಷಿಣದವರೂ ಕೂಡ ವಿಂಧ್ಯದ ದಕ್ಷಿಣ ಭಾಗದೊಳಗಿರುವ ಕೆಲವು ಸ್ಥಳಗಳನ್ನು ಯಾತ್ರಾರ್ಥಿಗಳಾಗಿಯೇ ಸಂದರ್ಶಿಸುತ್ತಾರೆ. ನಾಶಿಕ, ಪಂಢರಾಪುರ, ಗೋಕರ್ಣ, ಉಡುಪಿ, ಧರ್ಮಸ್ಥಳ, ಸುಬ್ರಹ್ಮಣ್ಯ ಕ್ಷೇತ್ರ, ಕಂಚಿ, ಮಧುರೆ, ಶ್ರೀರಂಗ, ರಾಮೇಶ್ವರ, ತಿರುಪತಿ, ಮಂತ್ರಾಲಯ, ವಿದುರಾಶ್ವತ್ಥ, ಶ್ರೀರಂಗಪಟ್ಟಣ, ನಂಜನಗೂಡು ಮೇಲುಕೋಟೆ, ತಲಕಾಡು, ಶೃಂಗೇರಿ, ಬೇಲೂರು, ಹಳೇಬೀಡುಗಳು ಪುಣ್ಯಕ್ಷೇತ್ರಗಳಾಗಿವೆ. ಶ್ರವಣಬೆಳಗೊಳ ಮತ್ತು ಕಾರ್ಕಳ-ಮೂಡಬಿದ್ರೆಗಳು ಜೈನರಿಗೆ ಪ್ರಸಿದ್ಧ ಯಾತ್ರಾಸ್ಥಳಗಳಾಗಿವೆ. ಹನ್ನೆರಡು ವರುಷಕ್ಕೊಂದಾವರ್ತಿ ಅಸಂಖ್ಯಾತ ಜನರು ಉತ್ತರದಿಂದಲೂ ಗೋಮಟೇಶ್ವರ ಸ್ವಾಮಿಯ

ಮಹಾಮಸ್ತಕಾಭಿಷೇಕಕ್ಕಾಗಿ ಶ್ರವಣಬೆಳಗೊಳಕ್ಕೆ ಬರುತ್ತಾರೆ. ಹೀಗಾಗಿ ನಮ್ಮ ದೇಶದ ಜನರಿಗೆ ಸನಾತನ ಧರ್ಮದಲ್ಲಿ ಅಗಾಧವಾದ ಮಮತೆಯೂ ಭಕ್ತಿಯೂ ಇದೆ ಎನ್ನಲು ಅವರುಗಳ ಚಲನವಲನಗಳೇ ಸಾಕ್ಷಿಯಾಗಿವೆ.

ಯಾತ್ರಾರ್ಥಿಗಳಲ್ಲದವರೂ ಕೂಡ ಕೆಲವು ಸ್ಥಳಗಳನ್ನು ಸಂದರ್ಶಿಸುವ ಹಂಬಲವಿರುವುದು ಸ್ವಾಭಾವಿಕ. ನೈಸರ್ಗಿಕ ಸಂಪತ್ತಿನಿಂದ ಕೂಡಿರುವ ಮಲೆನಾಡುಗಳು, ಭೋರ್ಗರೆಯುತ್ತಾ ದಟ್ಟವಾದ ಅರಣ್ಯಗಳಲ್ಲಿಯೂ ಬಯಲು ಪ್ರದೇಶಗಳಲ್ಲೂ ಪ್ರವಹಿಸುವ ನಾಡಿನ ಜೀವ ನಾಡಿಯಂತಿರುವ ಜೀವನದಿಗಳು, ವಿದ್ಯುದ್ವೇಗದಿಂದ ಧುಮುಕುವ ಹಾಗು ವಿದ್ಯುಚ್ಛಕ್ತಿಯ ಉತ್ಪಾದನೆಗೆ ಸಹಾಯಕವಾಗಿರುವ ಕಾವೇರಿ ಮತ್ತು ಶರಾವತಿ ನದಿಗಳು, ಶ್ರವಣಬೆಳಗೊಳದ ಚಂದ್ರಬೆಟ್ಟದ ಮೇಲೆ ಒಂದೇ ಶಿಲೆಯಲ್ಲಿ ನಿರ್ಮಿಸಲಾಗಿರುವ ಗೋಮಟೇಶ್ವರ ವಿಗ್ರಹ, ಎಲ್ಲೋರಾ ಮತ್ತು ಅಜಂತಾದಲ್ಲಿ ಗುಹಾಂತರ್ಗತ ದೇವಾಲಯಗಳು, ಮಹಾಬಲಿಪುರದ ಕಲ್ಲಿನ ರಥಗಳು ಮುಂತಾದವುಗಳು ದಕ್ಷಿಣ ಭಾರತದ ಪ್ರೇಕ್ಷಣೀಯ ಸ್ಥಳಗಳಾಗಿವೆ. ಇವುಗಳಲ್ಲಿ ಕಾಣಬರುವ ಪ್ರಕೃತಿ ವೈಭವವನ್ನೂ ರಮಣೀಯತೆಯನ್ನೂ ನೋಡಿ ವಿಶೇಷವಾಗಿ ಸ್ಫೂರ್ತಿಯನ್ನೂ ಆನಂದವನ್ನೂ ಕವಿಗಳು ಪಡೆದಿದ್ದಾರೆಂದಲ್ಲಿ ಅತಿಶಯವಲ್ಲ. ಅವರವರಿಗೆ ಹೊಳೆದ ಕವಿತಾ ವಸ್ತುಗಳನ್ನು ಸನ್ನಿವೇಶದಿಂದ ಆರಿಸಿಕೊಂಡಿರುತ್ತಾರೆ. ೯೦೦ ಅಡಿ ಎತ್ತರದಿಂದ ಭರದಿಂದ ಧುಮುಕುವ ಶರಾವತಿ ನದಿಯ ವೇಗವನ್ನು ಇಂಜನಿಯರುಗಳು ನೋಡಿದ ದೃಷ್ಟಿಯೇ ಬೇರೆ, ಕವಿಗಳು ಕಂಡು ವಿಕಾಸಗೊಂಡ ರೀತಿಯೇ ಬೇರೆ.

ಶ್ರೀರಂಗಪಟ್ಟಣಕ್ಕೆ ಹೋದವರಲ್ಲಿ ಅಲ್ಲಿನ ಕೋಟೆ ಕೊತ್ತಳಗಳನ್ನು ದರಿಯಾ ದೌಲತ್ ಬಾಗನ್ನು ನೋಡ ಬಯಸಿದರೆ, ಕೆಲವರು ಶ್ರೀರಂಗನಾಥ ಸ್ವಾಮಿಯ ದರ್ಶನಾಕಾಂಕ್ಷಿಗಳಾಗಿಯೇ ಹೋಗುತ್ತಾರೆ. ಮತ್ತೆ ಕೆಲವರಿಗೆ ಕಾವೇರೀ ಸ್ನಾನದಿಂದಲೇ ತೃಪ್ತಿಯಾಗುತ್ತದೆ ಮುಸಲ್ಮಾನರಿಗಾದರೋ ಮೈಸೂರಿನ ಹುಲಿಯೆಂದು ಪ್ರಖ್ಯಾತನಾಗಿ ಆಳಿದ ಟೀಪೂಸುಲ್ತಾನ್ ಮತ್ತು ಅವನ ತಂದೆ ಹೈದರಾಲಿ ಇವರುಗಳ ಭೌತಿಕ ಶರೀರವನ್ನಿಟ್ಟು ಗೋರಿಗೊಳಿಸಿ ಭವ್ಯವಾದ ಕಟ್ಟಡವನ್ನು ಕಟ್ಟಿರುವ ಗಂಜಾಂ ಒಂದು ಯಾತ್ರಾ ಸ್ಥಳವಾಗಿದೆ.

ಹೀಗೆ ಪ್ರತಿಯೊಂದು ಸ್ಥಳಕ್ಕೂ ಒಂದು ಸ್ಥಳ ಪುರಾಣವಿದೆ, ಐತಿಹಾ

ಸಿಕ ಹಿನ್ನೆಲೆಯಿದೆ. ನಾಗರಿಕತೆಯಲ್ಲಿ ಮುಂದುವರಿದ ಜನಾಂಗಗಳು ಸಂಸ್ಕೃತಿಯಲ್ಲಿ ಪ್ರಗತಿಯನ್ನು ಪಡೆದವು. ಅದಕ್ಕೆ ನಿದರ್ಶನವಾಗಿ ಲಲಿತಕಲೆಗಳು ಸಾಹಿತ್ಯ ಇವುಗಳಲ್ಲಿ ಅವರುಗಳು ಜೀವನದಲ್ಲಿ ಸಾಧಿಸಿರತಕ್ಕ ತಮ್ಮ ಪರಿಷ್ಕೃತವಾದ ಭಾವನೆಗಳ ಸೌಂದರ್ಯವನ್ನು ನಮ್ಮ ಕಣ್ಣುಗಳಿಗೆ ಹಬ್ಬ ಅಥವಾ ಕಬ್ಬ ಉಂಟುಮಾಡುವಂತೆ ವ್ಯಕ್ತಪಡಿಸಿದ್ದಾರೆ. ಈ ಪುಸ್ತಕದ ಮುಖ್ಯ ವಿಷಯ ಹೊಯ್ಸಳರ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ ಎಂದು ಅರಿಸಿಕೊಳ್ಳಲಾಗಿದೆ

## ಹೊಯ್ಸಳರ ಆಳಿಕೆಯ ಹೆಚ್ಚಳದ ಕುರುಹು

ನಮ್ಮ ದೇಶದ ಪ್ರಾಚೀನ ಹಾಗು ಭವ್ಯವಾದ ಇತಿಹಾಸವು, ಬೌದ್ಧರ ಕಾಲದಿಂದ ಆರಂಭವಾಗಿ ಹೊಯ್ಸಳರ ಕಾಲದ ಮಧ್ಯ ಭಾಗದ ವರೆಗೆ ನಿರ್ಮಿಸಲಾಗಿರುವ ಸಾಧಾರಣ ಕಟ್ಟಡಗಳಿಂದಲೂ (ಸ್ತೂಪ, ಚೈತ್ಯ, ವಿಹಾರಗಳು) ಅಪೂರ್ವಕಲಾಕೌಶಲ್ಯದಿಂದ ಕೂಡಿರುವ ದೇವಾಲಯಗಳಿಂದಲೂ ಗೊತ್ತಾಗುತ್ತದೆ. ಚರಿತ್ರಕಾರರ ರೀತ್ಯಾ ಆಯಾ ಕಾಲದ ಕಟ್ಟಡಗಳಿಂದ ಆಳ್ವಿಕೆಯ ವೈಭವವನ್ನೂ ಮತ್ತು ಲಲಿತಕಲೆಗಳಲ್ಲಿ ಅವರುಗಳ ಅಭಿರುಚಿಯ ಔನ್ನತ್ಯವನ್ನೂ ನಿರ್ಧರಿಸುವ ಪ್ರಮಾಣಗಳಾಗಿವೆ—ಈ ದೇವಾಲಯಗಳು.

ದಕ್ಷಿಣ ಭಾರತದಲ್ಲಿ ನಿರ್ಮಿಸಲಾಗಿರುವ ಪ್ರಾಚೀನ ಕಲಾವಸ್ತುಗಳು ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಪಲ್ಲವರು, ಗಂಗರು, ಚೋಳರು ಮತ್ತು ಹೊಯ್ಸಳರ ಕಾಲದವುಗಳು. ಅವುಗಳಲ್ಲೆಲ್ಲಾ ಹೊಯ್ಸಳರ ಕಾಲದ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯು ಅಪೂರ್ವವಾದ ಭವ್ಯತೆಯಿಂದಲೂ ಕೂಡಿದ್ದಾಗಿ ಜಗತ್ತನ್ನೇ ವಿಸ್ಮಯಗೊಳಿಸುತ್ತದೆ ಹೊಯ್ಸಳರು ಕೆಲಕಾಲ ಬೇಲೂರನ್ನು ಮತ್ತು ದ್ವಾರಸಮುದ್ರವನ್ನು (ಈಗಿನ ಹಳೇಬೀಡು) ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಯಶಸ್ಸಿನಿಂದ ಆಳಿದರು. ಅವರ ರಾಜ್ಯಭಾರವು ಎಷ್ಟು ಸುವ್ಯವಸ್ಥಿತವೂ ಉತ್ತಮವೂ ಮಟ್ಟದ್ದೂ ಎಂದು ನಿರ್ಧರಿಸಲು ಅವರ ಆಳ್ವಿಕೆಯಲ್ಲಿ ನಿರ್ಮಿಸಿದ ದೇವಾಲಯಗಳೇ ನಿದರ್ಶನಗಳಾಗಿವೆ. ಮೈಸೂರು ದೇಶದಲ್ಲಿ ಅನೇಕ ಕಡೆಗಳಲ್ಲಿ ಆ ಕಾಲದ ಕಟ್ಟಡಗಳಿವೆ. ಕೆಲವನ್ನು

ಮಾತ್ರ ಹೇಳುವದಾದರೆ— ಬೇಲೂರು, ಹಳೇಬೀಡು, ದೊಡ್ಡಗದ್ದವಳ್ಳಿ, ಬೆಳವಾಡಿ, ಶೃಂಗೇರಿ, ಜಾವಗಲ್, ಅರಸೀಕೆರೆ, ಹಾರನಹಳ್ಳಿ, ಗ್ರಾಮಕೊರವಂಗಲ, ನುಗ್ಗೇಹಳ್ಳಿ, ಕಿಕ್ಕೇರಿ, ಶ್ರವಣಬೆಳಗೊಳ, ಸೋಮನಾಥಪುರ ಮುಂತಾದ ಸ್ಥಳಗಳಲ್ಲಿ ಮಾತ್ರವಲ್ಲದೆ ಉತ್ತರಕರ್ನಾಟಕದ ಗದಗು, ಲಕ್ಷ್ಮೇಶ್ವರ ಮುಂತಾದ ಕಡೆಗಳಲ್ಲಿಯೂ ಇವೆ. ಆದರೆ ಅವುಗಳಲ್ಲೆಲ್ಲಾ ಬೇಲೂರು ಮತ್ತು ಹಳೇಬೀಡಿನಲ್ಲಿ ಕಟ್ಟಿರತಕ್ಕ ದೇವಾಲಯಗಳು ಅಪೂರ್ವ ಶಿಲ್ಪಕಲಾ ಚಾತುರ್ಯದಿಂದ ಕೂಡಿದ ಸುಂದರ ಕಲಾವಸ್ತುಗಳಾಗಿ ಪರಿಣಮಿಸಿ ಜಗತ್ತಿನ ಕಲಾಕೋವಿದರನ್ನೇ ಮುಗ್ಧಗೊಳಿಸಿವೆ

ಪೌರ್ವಾತ್ಯ ಪಾಶ್ಚಾತ್ಯ, ಕಲಾಕೋವಿದರನ್ನೂ, ಇತಿಹಾಸ ಸಂಶೋಧಕರನ್ನೂ ಹಾಗು ದೈವಭಕ್ತಿಯಿಂದ ಕೂಡಿದವರನ್ನೂ ಬೇಲೂರಿನ ಜಗಪ್ರಸಿದ್ಧವಾದ ಶ್ರೀಚೆನ್ನಕೇಶವಸ್ವಾಮಿಯ ದೇವಾಲಯವು ಬಹಳ ಹಿಂದಿನ ಕಾಲದಿಂದಲೂ ಮನಸೆಳೆದಿದೆ. ಇಂಥಾ ಜಗದ್ವಿಖ್ಯಾತವಾದ ಶಿಲ್ಪಕಲಾ ಚಾತುರ್ಯದಿಂದ ಕೂಡಿ ವಿಧಿವತ್ತಾಗಿ ಪಾಂಚರಾತ್ರ ಆಗಮದ ರೀತ್ಯಾ ಪೂಜೆ ನಡೆಯುತ್ತಿರುವ ದೇವಾಲಯದ ಹಾಗು ಪುಣ್ಯವಿಶೇಷಗಳಿಂದ ಕೂಡಿ ಕನ್ನಡ ನಾಡಿನಲ್ಲಿ ವಿರಾಜಿಸುತ್ತಿರುವ ಬೇಲೂರಿನ ಸಂಕ್ಷೇಪ ಇತಿಹಾಸದ ಪರಿಚಯವಾದರೂ ಇರಬೇಕಾದುದು ಅತ್ಯವಶ್ಯಕವೆಂದು ತೋರುತ್ತದೆ.

## ಇಂದಿನ ಮಹಾ ಸಂದರ್ಶಕರು

ಅನೇಕ ವರುಷಗಳಿಂದಲೂ ರಾಜಮಹಾರಾಜರುಗಳು, ವೈಸರಾಯರುಗಳು, ಗೌರ್ನರುಗಳು (ರಾಜ್ಯಪಾಲರು) ದೇವಾಲಯವನ್ನು ನೋಡಿಕೊಂಡು ಹೋಗಿರುತ್ತಾರೆ. ಇತ್ತೀಚೆಗೆ ೧೯೨೭ ರಲ್ಲಿ ಮಹಾತ್ಮಾಗಾಂಧೀಜಿಯವರು, ಕಾಕಾ ಕಾಲೇಲ್ಕರ್‌ರವರು, ಎನ್. ಸಿ. ಕೇಲ್ಕರ್, ಬ್ಯಾರಿಸ್ಟರ್ ಕಾಶೀಪ್ರಸಾದ್‌ಜಯಸ್ವಾಲ್‌ರವರು, ಡಾ. ಪಟ್ಟಾಭಿ ಸೀತಾರಾಮಯ್ಯನವರು, ಡಾ. ರಾಧಾಕುಮುದ ಮುಖರ್ಜಿಯವರು, ಡಾ. ರಾಜೇಂದ್ರ ಪ್ರಸಾದ್‌ರವರು, ಡಾ ಬಿದನ್‌ಚಂದ್ರ ರಾಯ್‌ರವರು, ಜಸ್ಟಿಸ್ ಸಿ ಎಸ್. ರಾಜಾಧ್ಯಕ್ಷರು, ಗ್ರೀಸ್ ಮತ್ತು ಡೆನ್ಮಾರ್ಕಿನ ರಾಜಕುಮಾರ ಪೀಟರ್‌ರವರು, ಡಾ. ಅಮರನಾಥ ಝಾ, ಸರ್. ಟಿ. ವಿಜಯರಾಘವಾಚಾರಿಯವರು, ಮತ್ತು

ಸುಪ್ರಸಿದ್ಧ ನೃತ್ಯ ಕಲಾವಿದರಾದ ರಾಮಗೋಪಾಲರು ಮನಸಾರೆ ದೇವಸ್ಥಾನವನ್ನು ನೋಡಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ರಾಮಗೋಪಾಲರೂ, ಜಸ್ಟಿಸ್ ರಾಜಾಧ್ಯಕ್ಷರೂ, ಸರ್ ಎಸ್. ವಿ. ರಾಮಮೂರ್ತಿಯವರು ಎರಡು ಮೂರು ಸಲ ಬಂದು ನೋಡಿರುತ್ತಾರೆ. ಇನ್ನೂ ನೋಡಬೇಕೆಂಬ ಹಂಬಲವಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ

ತಾ. ೯-೭-೫೧ ರಲ್ಲಿ ಭಾರತದ ಮಹಾಪ್ರಧಾನರಾದ ಪಂಡಿತ ಜವಾಹರಲಾಲ್ ನೆಹರೂರವರು ಬೇಲೂರು-ಹಳೇಬೀಡು ದೇವಾಲಯಗಳನ್ನು ನೋಡಿಕೊಂಡು ಹೋಗಿ ಹಾಸನದಲ್ಲಿ ನೆರೆದ ಸಾರ್ವಜನಿಕ ಸಭೆಯಲ್ಲಿ ತಮ್ಮ ಅಗಾಧವಾದ ಸಂತೋಷವನ್ನು ವ್ಯಕ್ತಪಡಿಸಿದರು. ಇಂಥಾ ಮಹನೀಯರ ಆಗಮನವು ಜನಜನಿತವಾಗಿದೆ

ಅಲ್ಲಿಂದೀಚೆಗೆ ಕನ್ನಡ ನಾಡ ಮತ್ತು ನುಡಿಯ ಸೇವೆಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಸಮ್ಮೇಳನವು ೧೯೫೨ ಮೇ ತಿಂಗಳು ೧೬, ೧೭ ಮತ್ತು ೧೮ ರಲ್ಲಿ ಬೇಲೂರು ದೇವಾಲಯದ ಪ್ರಾಕಾರದೊಳಗೇ ಸಂಭ್ರಮದಿಂದ ಡಾ ಎಸ್. ಸಿ ನಂದೀಮಠರವರ ಅಧ್ಯಕ್ಷತೆಯಲ್ಲಿ ಜರುಗಿತು. ಸಮಾರಂಭವನ್ನು ಮೈಸೂರು ಪ್ರಜಾಸರಕಾರದ ಮಾನ್ಯ ಮಂತ್ರಿಗಳೂ ಕನ್ನಡ ಪ್ರೇಮಿಗಳೂ ಆದ ಶ್ರೀಮಾನ್ ಕೆ. ಹನುಮಂತಯ್ಯನವರು ಉದ್ಘಾಟಿಸುತ್ತಾ ಮೈಸೂರು ಸರಕಾರದವರು ಸಂಸ್ಕೃತಿ ಪ್ರಸಾರಕ್ಕೂ ಸಾಹಿತ್ಯ ಮತ್ತು ಕಲೆಗಳ ಪ್ರೋತ್ಸಾಹಕ್ಕೂ ವ್ಯವಸ್ಥೆಮಾಡುವ ಉದ್ದೇಶವುಳ್ಳವರಾಗಿದ್ದಾರೆಂದು ಸೂಚಿಸಿದರು. ಇಂದು ಆ ಯೋಜನೆಯು ಕಾರ್ಯರೂಪದಲ್ಲಿದೆ.

## ಜೀರ್ಣೋದ್ಧಾರ

ಹೊರಗಿನಿಂದ ಬಂದ ಪ್ರೇಕ್ಷಕರು ದೇವಸ್ಥಾನಕ್ಕೆ ಆಗಿರತಕ್ಕ ಜೀರ್ಣೋದ್ಧಾರ ಕೆಲಸಗಳನ್ನು ಅಷ್ಟಾಗಿ ಅರಿಯಲಾರರು. ಈಗ ಇರತಕ್ಕ ಪ್ರಾಕಾರದೊಳಗೆ ಮೂಲ ದೇವಸ್ಥಾನದ ಮುಂಭಾಗದಲ್ಲಿ ಇತ್ತೀಚೆಗೆ ವಿಜಯನಗರದ ಅರಸರುಗಳ ಕಾಲದಲ್ಲಿ ಕಟ್ಟಲಾಗಿದ್ದ ಕಲ್ಲು ಮಂಟಪಗಳು ಶಿಥಿಲವಾಗಿ ಅಪಾಯವುಂಟುಮಾಡುವ ಸ್ಥಿತಿಯಲ್ಲಿದ್ದವು. ಮುಂಭಾಗದ ಕಲ್ಯಾಣ ಮಂಟಪವನ್ನು ಅಥವಾ ಬಲಿ ಮಂಟಪವನ್ನು ನಾಗನಾಯ್ಕನು ಕಟ್ಟಿಸಿ

ದ್ದಿಂತಲೂ ಆ ಮಂಟಪವು ಕ್ರಿ. ಶ ೧೫೫೭ಕ್ಕೂ ಮೊದಲು ನಿರ್ಮಿಸಲಾಗಿ ತ್ತೆಂದೂ ಬೇಲೂರಿನ ೨೬ನೇ ಶಾಸನದಿಂದ ಗೊತ್ತಾಗುತ್ತದೆ ಈಗಿನಂತೆ ಕಲ್ಲು ಚಪ್ಪಡಿಗಳನ್ನು ಅಚ್ಚುಕಟ್ಟಾಗಿ ಜೋಡಿಸಿರಲಿಲ್ಲ. ಬಲಭಾಗದಲ್ಲಿ ಕೆಲವು ಗುಡಿಗಳು ಮತ್ತು ಎಡಭಾಗದಲ್ಲೂ ಕೆಲವು ಗುಡಿಗಳು ಕ್ರಮವಾಗಿ ರಲಿಲ್ಲ ಮೂಲದೇವಸ್ಥಾನದ ಕೆಲವೆಡೆಗಳಲ್ಲಿ ಕೊಳಕು, ಧೂಳು, ಮಣ್ಣು ಇವುಗಳಿಂದ ಕೂಡಿ ಕಟ್ಟಡವು ಶುಭ್ರವಾಗಿಯೂ ಮನೋಹರವಾಗಿಯೂ ಕಾಣುತ್ತಿರಲಿಲ್ಲ. ಕೆಲವು ವಿಗ್ರಹಗಳು ಊನವಾಗಿದ್ದವು. ಇವೆಲ್ಲವುಗಳನ್ನೂ ಸರಿಪಡಿಸಲು ನಮ್ಮ ಮಹಾರಾಜರಾದ ಆಳಿದ ಕೀರ್ತಿಶೇಷರಾದ ಶ್ರೀಮ ನ್ನಾಲ್ವಡಿ ಕೃಷ್ಣರಾಜ ಒಡೆಯರವರ ಆಳ್ವಿಕೆಯಲ್ಲಿ ಮತ್ತು ಸರ್ ಮಿರ್ಜಾ ಎಂ. ಇಸ್ಮೈಲ್‌ರವರು ದಿವಾನರಾಗಿದ್ದಾಗ ದೇವಸ್ಥಾನದ ಜೀರ್ಣೋದ್ಧಾರ ಕ್ಕಾಗಿ ೬೦ ಸಾವಿರಕ್ಕೂ ಮಿಗಿಲಾಗಿ ಹಣವನ್ನು ಮಂಜೂರ್ಮಾಡಿದರು.

ಮೈಸೂರು ಸರಕಾರದ ಪ್ರಾಚ್ಯ ಸಂಶೋಧನಾ ಡೈರೆಕ್ಟರವರಾಗಿದ್ದ ಡಾ || ಎಂ. ಎಚ್. ಕೃಷ್ಣಾರವರು, ಸೂಪರಿಂಟೆಂಡಿಂಗ್ ಇಂಜಿನಿಯರು, ಗೌರ್ನಮೆಂಟ ಆರ್ಕಿಟೆಕ್ಟ್ ಮುಂತಾದ ತಜ್ಞರನ್ನೊಳಗೊಂಡ ಸಮಿತಿಯವರು ಜೀರ್ಣೋದ್ಧಾರ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅವರ ಶ್ರಮದ ಫಲವಾಗಿ ಇಂದು ಶಿಥಿಲವಾಗಿದ್ದ ಕಟ್ಟಡ ಭದ್ರವಾಗಿದೆ. ಮಸುಕು ಮಸುಕಾಗಿದ್ದ ಕೆತ್ತನೆಯ ಕೆಲಸ ಶೋಭಾಯಮಾನವಾಗಿದೆ.

ಜೀರ್ಣೋದ್ಧಾರ ಕಾರ್ಯವು ಮುಗಿದ ನಂತರ ೧೯೪೦ರಲ್ಲಿ ನಮ್ಮ ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್‌ವರು ಬೇಲೂರು ಶಾಸನಗಳಲ್ಲಿ ಏಕಾದಶ ಅವತಾರನೆಂದು ಶಾಸನಗಳಲ್ಲಿ ಪ್ರತೀತಿ ಯಿರುವ ವಿಷ್ಣುವರ್ಧನ ರಾಜನ ಕಂಚಿನ ಪ್ರತಿಮೆ ಮತ್ತು ನಾಲ್ಮಡಿ ಶ್ರೀ ಕೃಷ್ಣರಾಜ ಒಡೆಯರ್‌ರವರ ಪ್ರತಿಮೆಗಳನ್ನು ಸ್ಥಾಪಿಸುವ ಸಮಾರಂಭಕ್ಕೆ ಆಗಮಿಸಿದ್ದರು. ಈ ಪ್ರತಿಮೆಗಳನ್ನು ಸ್ಥಾಪಿಸಲಾಗಿರುವ ಕಲ್ಲಿನ ಮಂಟಪ ದಲ್ಲಿ ದೇವಸ್ಥಾನದ ಐತಿಹ್ಯವನ್ನು ತಿಳಿಸುವ ಆಧುನಿಕ ಶಾಸನವೂ ಕೆತ್ತಲ್ಪ ಟ್ಟಿದೆ. ಅದನ್ನು ಬೇರೊಂದು ಕಡೆ ಕೊಡಲಾಗಿದೆ.

## ಐತಿಹಾಸಿಕ ಮಹತಿ

ಅತ್ಯಾಧುನಿಕರಿಗೂ ಇಷ್ಟು ಆಕರ್ಷಕವಾಗಿರುವ ಸ್ಥಳದ ಪರಿಚಯ ವಾದರೂ ಉಂಟುಮಾಡಿಕೊಡಬೇಕಾದುದು ಅವಶ್ಯಕವೆನಿಸಿದೆ. ಪುರಾಣೇತಿಹಾಸಗಳಲ್ಲಿ 'ಏಲಾಪುರ' 'ವೇಲಾಪುರಿ,' 'ಭೂವೈಕುಂಠ,' 'ದಕ್ಷಿಣ ವಾರಣಾಸಿ' ಎಂದು ಬೇಲೂರು ಪ್ರಸಿದ್ಧ ಯಾತ್ರಾ ಸ್ಥಳವಾಗಿದೆ. ಬೇಲು ಹೂರು ಎಂಬುದು ಕೂಡ ಬೇಲೂರೇ ಆಗಿದೆ. ಹೊಯ್ಸಳ ಸಾಮ್ರಾಟರ ರಾಜಧಾನಿಯಾಗಿ ಅತುಲವಾದ ಯಶಸ್ಸಿನಿಂದ ಮೆರೆದುದಲ್ಲದೆ ಇತಿಹಾಸ ಸಂಶೋಧಕರಿಗೂ ಕೂಡ ಇಂದಿಗೂ ಕೂಡ ಆಕರ್ಷಕ ಸ್ಥಳವಾಗಿದೆ. ಶ್ರೀ ವ್ಯಾಸರಾಯರೂ, ವಾದಿರಾಜ ಸ್ವಾಮಿಗಳವರೂ, ಕನಕದಾಸರೂ, ಪುರಂದರ ದಾಸರೂ, ಅಚಲಾನಂದರೂ ಮುಂತಾದ ಯತಿಶ್ರೇಷ್ಠರೂ, ದಾಸಮಹನೀಯರೂ ಇಲ್ಲಿ ಸಂಚರಿಸಿ ದೇವರ ಮಹಿಮೆಯನ್ನು ನಾನುರೂಪದಲ್ಲಿ ಕನ್ನಡ ನಾಡಿನಲ್ಲೆಲ್ಲಾ ಕೊಂಡಾಡಿ ಪ್ರಚುರ ಪಡಿಸಿರುತ್ತಾರೆ

ಹರಿಶ್ಚಂದ್ರಕಾವ್ಯವನ್ನು ರಚಿಸಿದ ರಾಘವಾಂಕ ಕವಿಯು (ವೀರಶೈವ ಕವಿ) ಬೇಲೂರಿನಲ್ಲಿಯೇ ಜನಿಸಿದುದು ಆ ಕವಿಯ ಗದ್ದುಗೆಯು ಬೇಲೂರಿನ ಪಕ್ಕದಲ್ಲಿಯೇ ಇವೆ ಎಂದು ಬಲ್ಲವರು ಹೇಳುತ್ತಾರೆ

ಚಿಕ್ಕ ದೇವರಾಜರ ಇಚ್ಛೆಯಂತೆಯೇ "ದಿವ್ಯಸೂರಿಚರಿತೆ"ಯನ್ನೂ, ಶ್ರೀವೈಷ್ಣವ ಮತಕ್ಕೆ ಸಂಬಂಧಿಸಿದಂತೆ ಪುರಾಣಗಳನ್ನೂ, ಕ್ಷೇತ್ರ ಮಹಿಮೆಗಳನ್ನೂ—ತತ್ವನಿರೂಪಣೆಯನ್ನೂ ಕುರಿತು ಸುಮಾರು ೩೦ ಪುಸ್ತಕಗಳನ್ನು ಬರೆದಿರತಕ್ಕ ಚಿಕುಪಾಧ್ಯಾಯ ಕವಿಯು ಜೀವಿಸಿದ್ದು ಬೇಲೂರಿನಲ್ಲಿಯೇ. ಈ ಕವಿಯು ಪೌರುಕುತ್ಸ ಗೋತ್ರೋದ್ಭವನೆಂತಲೂ ರಾಜರಿಗೆ ಸಚಿವ ವರನಾಗಿದ್ದನೆಂದೂ ಗೊತ್ತಾಗುತ್ತದೆ.

## ಬೇಲೂರು ಎಲ್ಲಿದೆ? ಅಲ್ಲಿ ಏನೇನಿದೆ?

ಇಂದಿನ ಬೇಲೂರು, ಹಾಸನ ಜಿಲ್ಲೆಯಲ್ಲಿ ಹಾಸನದಿಂದ ೨೪ ಮೈಲಿ ದೂರದಲ್ಲಿರುವ ತಾಲ್ಲೂಕು ಕೇಂದ್ರವಾಗಿರುತ್ತದೆ. ಈ ಊರನ್ನು ಸೇರಲು ಎಲ್ಲಾ ಮಾರ್ಗಗಳಲ್ಲೂ ಬಸ್ಸುಗಳ ವ್ಯವಸ್ಥೆ ಇರುತ್ತದೆ. ಬಾಣಾವರ ರೈಲ್

ಸ್ಟೇಷನ್ನಿನಿಂದಾ ಪಶ್ಚಿಮಕ್ಕೆ ೨೮ ಮೈಲಿ ದೂರದಲ್ಲಿಯೂ, ಚಿಕ್ಕಮಗಳೂರಿಗೆ ದಕ್ಷಿಣದಲ್ಲಿ ೧೫ ಮೈಲಿ ದೂರದಲ್ಲೂ, ಮೂಡಿಗೆರೆಗೆ ಪೂರ್ವದಲ್ಲಿ ೨೨ ಮೈಲಿ ದೂರದಲ್ಲೂ. ಸಕಲೇಶಪುರಕ್ಕೆ ಉತ್ತರದಲ್ಲಿ ೨೪ ಮೈಲಿ ದೂರದಲ್ಲೂ ಬೇಲೂರು ಇರುತ್ತದೆ. ಬಾಣಾವರದ ಮಾರ್ಗವಾಗಿ ಬರುವವರು ಹಳೇಬೀಡನ್ನು ನೋಡಿಯೇ ಮುಂದಿನ ಬಸ್ಸಿನಲ್ಲಿ ಬೇಲೂರನ್ನು ಸೇರಬಹುದು. ಇತ್ತೀಚೆಗೆ ಹಾಸನದಿಂದಾ ಸಾಲಗಾಮೆ ಮತ್ತು ಹಳೇಬೀಡು ಮಾರ್ಗವಾಗಿ ಬೇಲೂರನ್ನು ಸೇರಲು ಹೊಸದಾಗಿ ರಸ್ತೆಯನ್ನು ನಿರ್ಮಿಸಿದ್ದಾರೆ.

ಯಾತ್ರಾರ್ಥಿಗಳಾಗಿ ಅಥವಾ ಪ್ರೇಕ್ಷಕರಾಗಿ ಬರುವ ಜನರ ಅಂತಸ್ತಿಗೆ ತಕ್ಕ ಸೌಲಭ್ಯ ಪಡೆದುಕೊಳ್ಳಬಹುದು ಊರಿನ ಮಧ್ಯ ಭಾಗದಲ್ಲಿರುವ ಪ್ರವಾಸಿ ಮಂದಿರದಲ್ಲಿ (ಟ್ರಾವಲರ್ಸ ಬಂಗಲೆ ಊಟ ಮತ್ತು ಸ್ನಾನದ ವ್ಯವಸ್ಥೆಗೆ ಪ್ರತ್ಯೇಕವಾದ ಕೊಠಡಿಗಳಿವೆ. ಉಳಿದುಕೊಳ್ಳುವವರಿಗೆ ಸೌಕರ್ಯ ಕಲ್ಪಿಸಲು ಮೇಟಿ ಇರುತ್ತಾನೆ ಸಾಮಾನ್ಯ ಅಂತಸ್ತಿನವರು ಕೂಡ ಉಳಿದುಕೊಳ್ಳಲು ಟಿ ಬಿ ಪಕ್ಕದಲ್ಲೇ ಮುಸಾಫರಖಾನೆ ಇದೆ

ಕೋಟೆಯಲ್ಲಿ ದೇವಸ್ಥಾನದ ಎದುರಿನಲ್ಲಿಯೇ ಕಳಸಾಪುರದ ಕಾಫಿ ಪ್ಲಾಂಟರು ಲೇಟ್ ತಮ್ಮಯ್ಯನವರು ಧರ್ಮಾರ್ಥವಾಗಿ ಕಟ್ಟಿಸಿರುವ ಛತ್ರವಿದೆ. ದೇವಸ್ಥಾನದ ವಿವರಗಳನ್ನು ಬಲ್ಲವರಿಂದ ತಿಳಿಯಬಹುದು. ಅವರು ದೇವಸ್ಥಾನದ ಹತ್ತಿರದಲ್ಲೇ ಇರುತ್ತಾರೆ

ಬೇಲೂರು ತಾಲೂಕಿನ ಸ್ಥಳವಾದುದರಿಂದ ನವನಾಗರಿಕತೆಗೆ ತಕ್ಕಂತೆ ತಾಲ್ಲೂಕ ಕಛೇರಿ, ಪೋಸ್ಟ ಆಫೀಸ. ಆಸ್ಪತ್ರೆ ಮೊದಲಾದವುಗಳೂ ಇವೆ. ಊರಿನಲ್ಲೆಲ್ಲಾ ನಲ್ಲಿ ಮತ್ತು ವಿದ್ಯುದ್ದೀಪದ ಸೌಕರ್ಯವಿದೆ. ಪೇಟೆ ಮತ್ತು ಕೋಟೆ ಎಂದು ಎರಡು ಭಾಗಗಳಿದ್ದು ಜೀವನೋಪಯುಕ್ತವಾದ ಪದಾರ್ಥಗಳನ್ನೊದಗಿಸುವ ದೊಡ್ಡ ಅಂಗಡಿಗಳೂ, ಪ್ರಯಾಣೀಕರ ಮತ್ತು ಊರಿನವರ ಸೌಕರ್ಯಕ್ಕಾಗಿ ತಿಂಡಿಯ ಮತ್ತು ಊಟದ ಹೋಟೇಲುಗಳೂ ಇವೆ

ಈ ತಾಲ್ಲೂಕಿನ ಕೆಲವು ಭಾಗಗಳನ್ನು ಮಲೆನಾಡೆಂದೂ ಮತ್ತೆ ಕೆಲವು ಭಾಗಗಳನ್ನು ಮೈದಾನ ಸೀಮೆಯೆಂದೂ ವಿಂಗಡಿಸಬಹುದು ಕೆಲವು ಪ್ರದೇಶಗಳಲ್ಲಿ ಸರಾಸರಿ ೨೦ರಿಂದಾ ೩೫ ಇಂಚುಗಳ ವರೆಗೂ ಮಳೆ ಬೀಳುತ್ತದೆ. ಇಂಥಾ ಪ್ರದೇಶದಲ್ಲಿ ಭತ್ತ, ಕಬ್ಬು, ರಾಗಿ, ಎಳ್ಳು, ನೆಲಗಡಲೆ,

ಹುರುಳಿ, ದ್ವಿದಳ ಧಾನ್ಯಗಳು, ನೀರುಳ್ಳಿ, ಮೆಣಸಿನಕಾಯಿ, ಆಲೂಗಡ್ಡೆ, ಜೋಳ, ಕೊತ್ತುಂಬರಿ, ಗೋಧಿ, ಬೆಳ್ಳುಳ್ಳಿ, ಹರಳು, ಹತ್ತಿ ಇವುಗಳೂ, ತೆಂಗು, ಅಡಿಕೆ, ಕಾಫಿ, ಯಾಲಕ್ಕಿ, ಮೆಣಸು ಮತ್ತು ಬಾಳೆ, ನಿಂಬೆ, ಮಾವು, ಹಲಸು, ಕಿತ್ತಳೆ, ಮಾದಳ, ನೇರಳೆ ಇವುಗಳೆಲ್ಲಾ ಬೆಳೆದು ಫಲಿಸುತ್ತವೆ. ಕಾಡಿನಲ್ಲಿ ಬೀಟೆ, ಹೊನ್ನೆ, ಮತ್ತಿ, ನಂದಿ, ಹಲಸು, ಹಿಪ್ಪೆ ತೇಗ, ಕರಿಮರ–ಗಂಧ ಮುಂತಾದ ಜಾತಿಯ ಮರಗಳು ಬೆಳೆಯುತ್ತವೆ. ಹಸು, ಎಮ್ಮೆ, ಕುರಿ, ಆಡು ಇವುಗಳು ಬದುಕುತ್ತವೆ. ಕೆಲವು ಕಾಡುಗಳಲ್ಲಿ ಹುಲಿ, ಚಿರತೆ, ಜಿಂಕೆ, ಸಾರಂಗಗಳಿವೆ. ಎಲ್ಲಾ ಬಗೆಯ ತರಕಾರಿಗಳೂ ಬೆಳೆಯುತ್ತವೆ. ಇವುಗಳನ್ನು ಪ್ರತಿ ಸೋಮವಾರವೂ ಬೇಲೂರಿನಲ್ಲಿ ಸೇರತಕ್ಕ ಸಂತೆಯಲ್ಲಿ ಮಾರಾಟಕ್ಕಾಗಿ ತರುತ್ತಾರೆ.

ಊರಿಗೆ ಉತ್ತರ ದಿಕ್ಕಿನ ದಿಗಂತದಲ್ಲಿ ಕಾಣಬರುವ ಪರ್ವತಶ್ರೇಣಿಗೆ ಬಾಬಾಬುಡನ್‌ಗಿರಿ ಎಂದು ಹೆಸರು. ಚಂದ್ರದ್ರೋಣ ಪರ್ವತವೆಂದೂ ಹೆಸರು. ಇದರ ತಪ್ಪಲಿನಲ್ಲಿ ಅನೇಕ ಕಾಫಿ ತೋಟಗಳಿವೆ. ಗಿರಿ ಕಾಫಿ ಎಂದು ಚಿಕ್ಕಮಗಳೂರಿನ ಕಾಫಿಗೆ ಹೆಸರು. ಮೇಲೆ ವಿವರಿಸಿರುವ ಪರ್ವತದಲ್ಲಿ ಯಗಚಿ ಎಂಬ ಹೆಸರಿನ ನದಿಯು ಹುಟ್ಟಿ ಬೇಲೂರಿನ ಮುಂದೆ ಪ್ರವಹಿಸಿ ಗೊರೂರಿನ ಹತ್ತಿರ ಹೇಮಾವತಿಯನ್ನು ಸೇರುತ್ತದೆ. ಬೇಸಾಯಕ್ಕೆ ಅನುಕೂಲಿಸುವಂತೆ ಬೇಲೂರು ಸೇತುವೆಗೆ ಒಂದು ಮೈಲಿ ಮೇಲ್ಭಟ್ಟದಲ್ಲಿ ಕೂಡ್ಲೂರು ಎಂಬಲ್ಲಿ ನದಿಗೆ ಒಂದು ಸಣ್ಣ ಅಣೆಕಟ್ಟನ್ನು ಕಟ್ಟಿ ಅಲ್ಲಿಂದಾ ಸೇತುವೆಯ ಮೇಲ್ಭಾಗದಲ್ಲಿ ಹಾಯ್ದು ಹೋಗುವಂತೆ ಒಂದು ನಾಲೆಯನ್ನು ತೆಗೆದಿದ್ದಾರೆ. ಇದೇ ನದಿಯ ನೀರನ್ನು ನಲ್ಲಿಗಳ ಮೂಲಕ ಊರಿಗೆ ಒದಗಿಸಲಾಗುತ್ತಿದೆ. ಮುಂದೆ ಹಾಸನದ ಸಮೀಪದಲ್ಲಿ ಹಾಲವಾಗಿಲು ಎಂಬಲ್ಲಿಂದಾ ಊರಿಗೆ ನದಿಯ ನೀರು ಒದಗಿಸಲಾಗುತ್ತದೆ

ನದಿಯ ಸೌಕರ್ಯ ಮಾತ್ರವಲ್ಲದೆ ಕೆರೆಯ ಅನುಕೂಲತೆಯೂ ಈ ಊರಿನ ಜನರಿಗಿದೆ. ದೇವಸ್ಥಾನದ ದಕ್ಷಿಣಕ್ಕೆ ನೇರವಾಗಿ ಸಕಲೇಶಪುರಕ್ಕೆ ಹೋಗುವ ರಸ್ತೆಯ ಪಕ್ಕದಲ್ಲೇ ಊರಿನ ಸಮೀಪದಲ್ಲಿ ವಿಷ್ಣುಸಮುದ್ರವೆಂಬ ಹೆಸರಿನ ವಿಶಾಲವಾದ ಕೆರೆ ಇದೆ. ಸ್ನಾನಕ್ಕೂ ಬಟ್ಟೆ ಒಗೆಯುವದಕ್ಕೂ, ದನಕರುಗಳಿಗೆ ನೀರು ಕುಡಿಸುವುದಕ್ಕೂ, ವ್ಯವಸಾಯಕ್ಕೂ ಈ ಕೆರೆಯು

ನೀರನ್ನು ಉಪಯೋಗಿಸುತ್ತಾರೆ. ಈ ಕೆರೆಯನ್ನು ವಿಷ್ಣುವರ್ಧನ ಮಹಾ ರಾಜನೇ ಕಟ್ಟಿಸಿದನೆಂದು ಸ್ಥಳ ಮಹಾತ್ಮೆಯಿಂದ ಗೊತ್ತಾಗುತ್ತದೆ. ಒಂದು ದಿನ ವಿಷ್ಣುವರ್ಧನನು ಬೇಟೆಗಾಗಿ ಹೋಗಿದ್ದವನು ಆಯಾಸದಿಂದ ಮರಳಿ ಬರುವಾಗ್ಗೆ ತನ್ನ ಸೇವಕನಿಗೆ ನೀರನ್ನು ತರಲು ಆಜ್ಞಾಪಿಸಿದನೆಂತಲೂ, ಕುಷ್ಠರೋಗ ಪೀಡಿತನಾದ ಆ ಸೇವಕನು ನೀರನ್ನು ಮುಟ್ಟಿದ ತಕ್ಷಣವೇ ಕೈಯ ಬಿಳುಪೆಲ್ಲಾ ಅದೃಶ್ಯವಾಗಲು ಅಲ್ಲಿ ಸ್ನಾನಮಾಡಿದವನಾಗಿ ಸಂಪೂರ್ಣವಾಗಿ ರೋಗದಿಂದ ಮುಕ್ತನಾಗಿ ಬಂದದ್ದನ್ನು ನೋಡಿ ದೊರೆಯು ಆಶ್ಚರ್ಯಭರಿತನಾದನು. ಆ ಜಾಗವು ಮಹಾಪುಣ್ಯ ವಿಶೇಷಗಳಿಂದ ಕೂಡಿದ್ದೆಂದು ಭಾವಿಸಿ ಅಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು. ಸಮುದ್ರದ ಲಕ್ಷಣಗಳೆಲ್ಲವೂ ಈ ಕೆರೆಯಲ್ಲಿ ಕಾಣಬಂದಿವೆ. ಬಲಮುರಿ ಶಂಖಗಳೂ, ಹಲಸಿನ ಬೀಜದ ಪ್ರಮಾಣವಿರುವ ದೇವರ ಮೂಗುತಿಗೆ ಹಾಕಿರುವ ಮುತ್ತೂ ಈ ಕೆರೆಯಲ್ಲಿ ಸಿಕ್ಕಿದ್ದರಿಂದಲೂ. ಒಂದು ಜೀವನದಿಯು ಬಂದು ಸೇರುವುದರಿಂದಲೂ ಮೇಲಾಗಿ ವಿಷ್ಣುವರ್ಧನರಾಯನು ಕಟ್ಟಿಸಿದ ಕೆರೆಯಾದ್ದರಿಂದಲೂ ವಿಷ್ಣುಸಮುದ್ರವೆಂದು ಕರೆಯುತ್ತಾರೆ. ಕೆರೆಯ ಮಧ್ಯದಲ್ಲಿ ಒಂದು ಕಲ್ಲು ಮಂಟಪವಿದೆ. ತೆಪ್ಪೋತ್ಸವಸಮಯದಲ್ಲಿ ದೇವರನ್ನು ಕೂರಿಸಿ ಮಂಗಳಾರತಿಯನ್ನು ಮಾಡುತ್ತಾರೆ. ಇದೇ ಕೆರೆಯ ನೀರನ್ನು ದೇವಸ್ಥಾನದ ಮರ್ಯಾದೆಯೊಡನೆ ಪೂಜೆಗಾಗಿ ಪ್ರತಿನಿತ್ಯವೂ ರಜತ ಪಾತ್ರೆಯಲ್ಲಿ ತರುತ್ತಾರೆ.

ಬಹಳ ಹಿಂದಿನ ಕಾಲದಲ್ಲಿ ಬೇಲೂರು ಈಗಿನಂತಿರಲಿಲ್ಲ. ಚಾರಿತ್ರಿಕ ಹಿನ್ನೆಲೆಯನ್ನು ತಿಳಿದಲ್ಲದೆ ಅತ್ಯಂತ ವೈಭವದಿಂದ ಆಳಿ ಕೀರ್ತಿಗಳಿಸಿದ ಆ ಕಾಲದ ರಾಜರ ಆಳ್ವಿಕೆಯ ಸಂಭ್ರಮ, ಸೊಗಸು, ಶಿಸ್ತು ಇವುಗಳು ಗೊತ್ತಾಗುವುದಿಲ್ಲ. ಇಂದು ಬೇಲೂರು ಹೆಸರುವಾಸಿಯಾಗಿರುವುದು ಶ್ರೀ ಚೆನ್ನಕೇಶವ ದೇವಾಲಯದಿಂದ. ಅಂತೆಯೇ ಹಳೇಬೀಡು ಕೂಡ ಪ್ರಖ್ಯಾತವಾಗಿರುವುದು ಹೊಯ್ಸಳೇಶ್ವರ ದೇವಾಲಯದಲ್ಲಿ ಅಪೂರ್ವವಾಗಿ ಕಾಣಬರುವ ಅದ್ಭುತ ಶಿಲ್ಪಕಲಾ ಸೊಬಗಿನಿಂದ. ಈ ದೇವಾಲಯಗಳನ್ನು ಕಟ್ಟಿಸಿ ಪ್ರಖ್ಯಾತರಾಗಿರುವವರೇ ಹೊಯ್ಸಳರು. ಈ ಹೊಯ್ಸಳರು ಯಾರು? ಇವರ ಮೂಲ ಪುರುಷನು ಯಾರು? ಇವರು ರಾಜ್ಯ ಕಟ್ಟಿದ ಬಗೆ ಹೇಗೆ ಮುಂತಾದ ವಿವರಗಳನ್ನು ತಿಳಿಯಲು ಬೇಲೂರು ಶ್ರೀ ಚೆನ್ನಕೇಶವ ದೇವಾಲಯದೊಳಗಿರುವ ಶಿಲನೆಯ ಶಾಸನವು ಸಹಾಯಕವಾಗಿದೆ.

# ಹೊಯ್ಸಳರು ಯಾರು?

ಹೊಯ್ಸಳರ ಜನ್ಮಸ್ಥಳವು ಮೂಡಿಗೆರೆ ತಾಲ್ಲೂಕು ಅಂಗಡಿ ಎಂಬ ಗ್ರಾಮ. ಅಲ್ಲಿ ಒಂದಂಕಣದ ಕೇಶವ ದೇವಾಲಯುವಿದೆ. ಅದು ಇಂದು ಶಿಥಿಲ ವಾಗಿದೆ. ೧೯೩೦ರಲ್ಲಿ ಕೂಡ ಇದೇ ಸ್ಥಿತಿಯಲ್ಲಿತ್ತು. ಸ್ವಲ್ಪ ದೂರದಲ್ಲಿಯೇ ಇವರ ಮನೆದೇವತೆಯು ಸಪ್ತಮಾತೃಕೆಗಳಲ್ಲಿ ಒಂದಾದ ವೈಷ್ಣವೀಶಕ್ತಿಯಾದ ವಾಸಂತಿಕಾ ದೇವಿಯನ್ನು ಬ್ರಾಹ್ಮಣರೇ ಪೂಜಿಸುತ್ತಿದ್ದಾರೆ.

ಆ ಪ್ರದೇಶದವರು ವಸಂತ ಪರಮೇಶ್ವರಿ ದೇವಸ್ಥಾನವೆಂದು ಕರೆಯುತ್ತಾರೆ. ಮೈಸೂರಿನ ಅರಮನೆಯವರು ದೇವತಾ ಮುಖವಾಡಗಳಿಗೆ ಬಣ್ಣ ಹಾಕಿಸಿರುವುದಾಗಿ ಗೊತ್ತಾಗುತ್ತದೆ. ಶಾಸನಗಳಲ್ಲಿ " ಜಾತಾಃ ಶಶಪುರೆ " ಎಂದು ಉಲ್ಲೇಖಿತವಾಗಿರುವುದನ್ನೇ ಅಂಗಡಿ ಎಂದು ನಿಶ್ಚಯಿಸಲಾಗಿದೆ. ಅಲ್ಲದೆ 'ವಾಸಂತಿಕಾ ದೇವಿ ಲಬ್ಧ ವರ ಪ್ರಸಾದನುಂ' ಎಂದು ಹೊಗಳಿಕೊಂಡಿರುವ ಕಾರಣದಿಂದ ವಾಸಂತಿಕಾ ದೇವಿಯೇ ಇವರ ಮನೆದೇವತೆಯೆಂದು ನಿಸ್ಸಂದೇಹವಾಗಿ ನಿಶ್ಚಯಿಸಬಹುದು.

ಹೊಯ್ಸಳರ ಮೂಲ ಪುರುಷನಾದ ಸಳನೆಂಬವನು ತನ್ನ ಗುರುವಾದ ಸುದತ್ತನೆಂಬ ಜೈನಮುನಿಯ ಅಪ್ಪಣೆ ಮೇರೆಗೆ ಕಾಡಿನಲ್ಲಿ ಮನೆ ದೇವತೆಯ ಪೂಜೆಯಲ್ಲಿ ನಿರತನಾಗಿದ್ದಾಗ ಅನಿರೀಕ್ಷಿತವಾಗಿ ಹುಲಿಯು ಮೇಲೆ ಬೀಳಲು ಯತ್ನಿಸಿದಾಗ ಆ ಹುಲಿಯನ್ನು ಮುನಿಯು ಕೊಟ್ಟ ದೊಣ್ಣೆಯಿಂದ ಹೊಡೆದು ಕೊಂದಿದ್ದರಿಂದ ಹೊಯ್ಸಳನೆಂಬ ಹೆಸರು ಬಂದಿತೆಂದು ಪ್ರತೀತಿ ಇದೆ. ಮೇಲೆ ವಿವರಿಸಿದ ಶಾಸನದಲ್ಲಿ " ಶಾರ್ದೂಲಕಂ ಪ್ರತಿಹಿ ಪೊಯ್ಸಳ ಇತ್ಯತೋಭೂತ್ " ಎಂದು ಉಲ್ಲೇಖಿತವಾಗಿರುವುದು ಯಥಾರ್ಥವಾಗಿಯೇ ಇದೆ. ಹುಲಿಯೊಡನೆ ಹೋರಾಡುತ್ತಿರುವ ವಿಗ್ರಹಗಳನೇಕವನ್ನು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಪ್ರಾಮುಖ್ಯವಾಗಿರುವುದನ್ನು ನೋಡಬಹುದು. ಅದು ಅವರ ರಾಜತ್ವದ ಕುರುಹಾಗಿದೆ; ಅಥವಾ ಲಾಂಛನವಾಗಿದೆ.

ಹೊಯ್ಸಳರು ಯಾದವ ಸಂತತಿಗೆ ಸೇರಿದವರೆಂತಲೂ ಚಂದ್ರವಂಶದ ಅರಸುಮನೆತನದವರೆಂತಲೂ ಶಾಸನಗಳಿಂದ ಗೊತ್ತಾಗುತ್ತದೆ. (ಆಯುಸ್ತತಸ್ಯ ನಹುಷೋ ನಹುಷಾದ್ಯಯಾತಿಸ್ತಸ್ಮಾದ್ಯದುರ್ಯದುಕುಶೀಬಹವೋ

ಬಭೂವುಃ) ಪ್ರಾರಂಭದಲ್ಲಿ ಚಾಳುಕ್ಯ ಚಕ್ರವರ್ತಿಗಳ ಸಾಮಂತರಾಗಿದ್ದು ಹೊಯ್ಸಳರು ಕ್ರಮೇಣ ವಿಷ್ಣುವರ್ಧನನ ಕಾಲದಲ್ಲಿ ಸ್ವತಂತ್ರರಾಗಿ ರಾಜ್ಯವನ್ನು ವಿಸ್ತರಿಸಿದರು. ದ್ವಾರಸಮುದ್ರವೆಂದು ಕರೆಯಲ್ಪಡುತ್ತಿದ್ದ ಈಗಿನ ಹಳೇಬೀಡು ಅವರ ರಾಜಧಾನಿಯಾಗಿತ್ತು.

## ಹೊಯ್ಸಳರ ರಾಜ್ಯವಿಸ್ತಾರ

ವಿನಯಾದಿತ್ಯನ ಕಾಲದಲ್ಲಿ ಹೊಯ್ಸಳ ರಾಜ್ಯಕ್ಕೆ ಕೊಂಕಣ, ದಕ್ಷಿಣ ಕನ್ನಡ ಜಿಲ್ಲೆ, ವೈನಾಡು, ತಲಕಾಡು, ಮತ್ತು ಸಾವಿಮಲೆ ಭಾಗಗಳೂ ಸೇರಿದ್ದವು. ಅವನ ಮಗನಾದ ಯರೆಗಂಗನು ಚಾಳುಕ್ಯರ ಸೇನೆಯಲ್ಲಿ ದೊಡ್ಡ ದಂಡನಾಯಕನೆಂದು ಪ್ರಖ್ಯಾತನಾಗಿ ಮಾಳವ ರಾಜಧಾನಿಯಾದ ಧಾರ್ ಪಟ್ಟಣವನ್ನು ನಾಶಪಡಿಸಿದನೆಂದು ಗೊತ್ತಾಗುತ್ತದೆ. ಅವನ ತಂದೆಯ ಜೀವಿತ ಕಾಲದಲ್ಲೇ ಮೃತಪಟ್ಟನಾದ ಕಾರಣ ಈತನ ಮಕ್ಕಳು ರಾಜ್ಯಕ್ಕೆ ಉತ್ತರಾಧಿಕಾರಿಯಾದರು. ಅವರಲ್ಲೆಲ್ಲಾ ಬಿಟ್ಟಿಗ ಅಥವಾ ಬಿಟ್ಟಿದೇವನೇ ರಾಜ್ಯಕ್ಕೆ ಅರ್ಹನೆಂದು ಅಭಿಷಿಕ್ತನಾಗಿ ಕ್ರಿ. ಶ. ೧೧೦೪ ರಿಂದ ೧೧೪೧ರ ವರೆಗೆ ಆಳಿ ವಿಷ್ಣುವರ್ಧನನೆಂಬ ಹೆಸರಿನಿಂದ ಪ್ರಖ್ಯಾತನಾದನು. (Imperial Gazetteer of India—Mysore and Coorg–pages 13 and 14 ) ಆದರೆ ಮೈಸೂರು ಶಾಸನದ ಇಲಾಖೆಯ ಅಧಿಕೃತ ಪ್ರಕಟಣೆಯ ರೀತ್ಯಾ ( A Guide to Belur—page 2 ) ಕ್ರಿ. ಶ. ೧೧೦೦ ರಲ್ಲಿ ೧ನೆಯ ಬಲ್ಲಾಳನ ಕಾಲದಲ್ಲಿ ಬೇಲೂರು ಪ್ರಾಮುಖ್ಯವಾದ ಪಟ್ಟಣವಾಯಿತು. ಬಹಳ ಪರಾಕ್ರಮಶಾಲಿಯಾದ ಅವನ ತಮ್ಮನಾದ ಬಿಟ್ಟಿಗನು ಕ್ರಿ. ಶ. ೧೧೦೬ರಲ್ಲಿ ಅಧಿಕಾರಕ್ಕೆ ಬಂದನು. ಆಗ ಬಿಟ್ಟಿಗನು ಜೈನಮತಾವಲಂಬಿಯಾಗಿದ್ದನು ಅದೇ ಕಾಲದಲ್ಲಿ ಚೋಳ ರಾಜ್ಯದಿಂದ ಅಲ್ಲಿನ ಕಿರುಕುಳ ಸಹಿಸಲಾರದೆ ಈ ದೇಶಕ್ಕೆ ಬಂದಿದ್ದ ಶ್ರೀ ವೈಷ್ಣವ ಮತಸ್ಥಾಪನಾಚಾರ್ಯರಾದ ಶ್ರೀ ರಾಮಾನುಜಾಚಾರ್ಯರಿಗೆ ಬಿಟ್ಟಿಗನ ರಾಜ್ಯದಲ್ಲಿ ಆಶ್ರಯ ದೊರಕಿತು. ಅವರ ಬೋಧೆಯ ಪ್ರಭಾವದಿಂದ ಬಿಟ್ಟಿಗನಿಗೆ ಅವರಲ್ಲಿ ಪೂಜ್ಯಭಾವವುಂಟಾಗಿ ವೈಷ್ಣವ ಮತಕ್ಕೆ ದೀಕ್ಷೆಕೊಟ್ಟು ವಿಷ್ಣುವರ್ಧನನೆಂದು ಹೆಸರನ್ನು ಹೊಂದಿದವನಾದನು. ಅಂದಿನಿಂದ ಶ್ರೀ ರಾಮಾನುಜಾಚಾರ್ಯರನ್ನು

ಕುಲಗುರುವೆಂದು ಹಾಗು ರಾಜಗುರುವೆಂದು ಪೂಜ್ಯ ಭಾವದಿಂದ ಮರ್ಯಾದೆ ಮಾಡತೊಡಗಿದನು. ಮಾತ್ರವಲ್ಲದೆ ತನ್ನ ರಾಜಗುರುವಿನಲ್ಲಿ ವೈರತ್ವವನ್ನು ಹೊಂದಿದ್ದ ಚೋಳ ರಾಜನ ಮೇಲೆ ಯುದ್ಧಮಾಡಿ ಜಯಶೀಲನಾಗಿ ಅವರ ಪ್ರಾಂತಿಕ ರಾಜಧಾನಿಯಾಗಿದ್ದ ತಲಕಾಡನ್ನು ಕ್ರಿ ಶ. ೧೧೧೬ರಲ್ಲಿ ವಶಪಡಿಸಿಕೊಂಡು ಕನ್ನಡ ರಾಜ್ಯದ ಎಲ್ಲೆಯಿಂದ ಅವರನ್ನು ಹಿಮ್ಮೆಟ್ಟಿಸಿದನು. ಈ ವಿಜಯದ ಸ್ಮಾರಕಾರ್ಥವಾಗಿ ವಿಷ್ಣುವರ್ಧನನು ತನ್ನ ರಾಜ್ಯದ ಅನೇಕ ಭಾಗಗಳಲ್ಲಿ ವಿಷ್ಣು ದೇವಾಲಯಗಳನ್ನು ಕಟ್ಟಿಸಿದನು.

ಕ್ರಿ ಶ. ೧೧೧೬ರಲ್ಲಿ ಬೇಲೂರಿನಲ್ಲಿ ವಿಜಯ ನಾರಾಯಣನೆಂಬ ಬಹು ಸುಂದರವಾದ ಹಾಲಿ ಚೆನ್ನಕೇಶವ ದೇವಾಲಯವನ್ನು ಕಟ್ಟಿಸಿದನು, ಇದೇ ಕಾಲದಲ್ಲಿ ಪಂಚ ನಾರಾಯಣ ದೇವಾಲಯಗಳನ್ನು ಕಟ್ಟಿಸಿದನು. ತಲಕಾಡನ್ನು ಗೆದ್ದು ಹೊಯ್ಸಳರ ಕೀರ್ತಿಯು ಹರಡಿದ ಜ್ಞಾಪಕಾರ್ಥವಾಗಿ ಕೀರ್ತಿನಾರಾಯಣ ದೇವಾಲಯವನ್ನೂ, ಮೇಲುಕೋಟೆಯಲ್ಲಿ ಚೆಲುವರಾಯ ಸ್ವಾಮಿಯನ್ನೂ, ಗದುಗಿನಲ್ಲಿ ವೀರ ನಾರಾಯಣಸ್ವಾಮಿ ಮತ್ತು ಕೊಂಡನೂರಿನಲ್ಲಿ ನಂಬಿ ನಾರಾಯಣನೆಂಬ ವಿಷ್ಣು ವಿಗ್ರಹವನ್ನೂ ಸ್ಥಾಪಿಸಿದನು. ಬೇಲೂರಿನಲ್ಲಿರುವ ಶ್ರೀ ವಿಜಯ ನಾರಾಯಣನೆಂದು ವಿಷ್ಣುವಿನ ಪೂಜೆಗಾಗಿಯೇ ಪ್ರತಿಷ್ಠಿತವಾಗಿರುವ ಕೇಶವ ದೇವಾಲಯವೇ ಬಹಳ ಸುಂದರವಾದುದು ಮತ್ತು ದೊಡ್ಡದಾಗಿಯೂ ಇದೆ

ವೈಷ್ಣವ ಮತವನ್ನು ಅವಲಂಬಿಸಿದರೂ ಕೂಡ ವಿಷ್ಣುವರ್ಧನನು ಪಂಚಲಿಂಗ ಪ್ರತಿಷ್ಠೆ ಮಾಡಿಸಿದನು. ಅಮೃತೇಶ್ವರ, ಶಂಕರೇಶ್ವರ, ಪಾತಾಳೇಶ್ವರ, ಶಿಲಾಮಲ್ಲೇಶ್ವರ, ವಿಷಕಂಠೇಶ್ವರ ಎಂಬ ಐದು ಶಿವಾಲಯಗಳನ್ನು ಕಟ್ಟಿಸಿದನು.

ವಿಷ್ಣುವರ್ಧನನ ರಾಜ್ಯದ ವಿಸ್ತಾರವನ್ನು ಸಂಕ್ಷೇಪವಾಗಿ ತಿಳಿಯುವ ಆವಶ್ಯಕತೆಯಿದೆ. ಏತಕ್ಕೆಂದರೆ ಹೊಯ್ಸಳರ ಕಾಲದ ವಾಸ್ತುಶಿಲ್ಪ ಮತ್ತು ಶಿಲ್ಪಕಲಾ ಚಾತುರ್ಯ ಕರ್ಣಾಟಕದ ಆನೇಕ ಭಾಗಗಳಲ್ಲಿ ಕಾಣಬಹುದಾಗಿದೆ. ಕನ್ನಡ ರಾಜ್ಯದ ಒಡೆತನ ಮಾಡುತ್ತಿದ್ದ. ಕನ್ನಡವೇ ಮಾತೃಭಾಷೆಯಾಗಿದ್ದ ಹೊಯ್ಸಳರ ಕಾಲದ ಕರ್ಣಾಟಕವು ಎಷ್ಟು ವಿಸ್ತಾರವಾಗಿದ್ದಿತೆಂದು ಗೊತ್ತಾಗುತ್ತದೆ. ಪೂರ್ವದಲ್ಲಿ ಕೋಲಾರದ ತಗ್ಗಿನ ಪ್ರದೇಶ,

ದಕ್ಷಿಣದಲ್ಲಿ ಸೇಲಂ ಮತ್ತು ಕೊಯಮತ್ತೂರು ಜಿಲ್ಲೆಗಳು, ಪಶ್ಚಿಮದಲ್ಲಿ ಕೊಂಕಣದ ಬಾರಕನೂರು ಘಾಟಿರಸ್ತೆ, ಉತ್ತರದಲ್ಲಿ ಸಾವಿನುಲೆ, ಚಂದ್ರ ಗುತ್ತಿ, ಬನವಾಸಿ, ಬಂಕಾಪುರ, ಹಾನಗಲ್ಲು, ಗೋದಾವರಿಗಳನ್ನೊಳ ಗೊಂಡಿತ್ತು.

ದಕ್ಷಿಣದಲ್ಲಿ ರಾಮೇಶ್ವರದ ವರೆಗೂ ವಿಸ್ತರಿಸಿತ್ತು. ವಿಷ್ಣುವರ್ಧನನು ಧಾರವಾಡ ಜಿಲ್ಲೆಯ ಬಂಕಾಪುರದಲ್ಲಿ ಕಾಲವಾದ ತರುವಾಯ ಅವನ ಮಗ ವೀರಬಲ್ಲಾಳನು ಕ್ರಿ. ಶ. ೧೧೭೩ರಲ್ಲಿ ರಾಜ್ಯಾಭಿಷಿಕ್ತನಾಗಿ ಬಹಳ ವಿತರಣೆ ಯಿಂದ ಆಳಿ ಬಲ್ಲಾಳರ ಸಂತತಿಯೆನಿಸುವಷ್ಟು ಕೀರ್ತಿ ಗಳಿಸಿದನು. ಉತ್ತ ರದಲ್ಲಿ ದೇವಗಿರಿಯ ಯಾದವರು ಮತ್ತು ಕಲಚೂರಿಯ ರಾಜರುಗಳ ಮೇಲೆ ಸೊರಟೂರಿನಲ್ಲಿ ಯುದ್ಧಮಾಡಿ ಹೊಯ್ಸಳ ರಾಜ್ಯವನ್ನು ಪೆದ್ದೊರೆ ಅಥವಾ ಕೃಷ್ಣಾ ನದಿಯ ಆಚೆಗೂ ವಿಸ್ತರಿಸಿ ಧಾರವಾಡದ ಲಕ್ಕುಂಡಿಯಲ್ಲಿ ವಾಸಿಸ ತೊಡಗಿದನು. ತುಂಗಭದ್ರೆಯ ತೀರದ ಬೆಟ್ಟದ ಕೋಟೆ-ಕೊತ್ತಳಗಳನ್ನು ಆಧೀನ ಮಾಡಿಕೊಂಡು—ನಂತರ ಉಚ್ಚಂಗಿಯನ್ನು ವಶಪಡಿಸಿಕೊಂಡು ಅಲ್ಲಿನ ಪಾಂಡ್ಯರನ್ನು ಗೆದ್ದನು.

ಇವನ ತರುವಾಯ ೨ನೆಯ ನರಸಿಂಹನು ಶೇವುಣರನ್ನು ಹಿಮ್ಮೆಟ್ಟಿಸಿ, ಪಾಂಡ್ಯರನ್ನೂ, ಪಲ್ಲವರನ್ನೂ ಯುದ್ಧದಲ್ಲಿ ಸೋಲಿಸಿ ಚೋಳರ ಮುಖ್ಯ ನಾಯಕನಿಗೆ ತನ್ನ ರಾಜ್ಯದಲ್ಲಿ ಆಶ್ರಯ ಕೊಟ್ಟನು. ೧೨೩೩ರಲ್ಲಿ ಸೋಮೇ ಶ್ವರನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಶೇವುಣರು ಉತ್ತರದಿಂದ ಹೊಯ್ಸಳ ರಾಜಧಾನಿಯಾದ ದ್ವಾರಸಮುದ್ರದ ವರೆಗೆ ಬಂದು ಆಕ್ರಮಿಸಲು ಯತ್ನಿಸಿದರು. ವಾಯವ್ಯ ಭಾಗದಲ್ಲಿ ನೆಲೆಸಿದ್ದರು. ಅಷ್ಟರಲ್ಲಿ ದಂಡ ನಾಯಕ ಸಾಳುವ ತಿಮ್ಮನು ದ್ವಾರಸಮುದ್ರದಿಂದ ಶೇವುಣರನ್ನು ಹಿಮ್ಮೆಟ್ಟಿ ಸಿದನು. ೧೨೫೪ರಲ್ಲಿ ಸೋಮೇಶ್ವರನ ಮರಣಾನಂತರ ಹೊಯ್ಸಳರಾಜ್ಯವು ಎರಡು ಭಾಗವಾಗಿ ವಿಭಾಗಿಸಲ್ಪಟ್ಟು ರಾಜಧಾನಿಯೂ ಪುರಾತನ ಕನ್ನಡ ರಾಜ್ಯವೂ ೩ನೆಯ ನರಸಿಂಹನಿಗೂ ಮತ್ತು ಕೋಲಾರ ಜಿಲ್ಲೆಯನ್ನೊಳಗೊಂಡ ತಮಿಳು ಪ್ರದೇಶಗಳು ಇನ್ನೊಬ್ಬ ಮಗನಾದ ರಾಮನಾಥನಿಗೂ ಕೊಡ ಲ್ಪಟ್ಟವು. ೧೨೯೧ರಲ್ಲಿ ರಾಜ್ಯಕ್ಕೆ ಬಂದ ೩ನೆಯ ಬಲ್ಲಾಳನ ಕಾಲದಲ್ಲಿ ಒಗ್ಗಟ್ಟು ಸಾಧಿಸಲಾಯಿತು. ಆದರೆ ಕ್ರಿ. ಶ. ೧೩೧೦ರಲ್ಲಿ ಅಲ್ಲಾವುದ್ದೀನ್

ಖಿಲ್ಜಿಯ ದಂಡನಾಯಕನಾದ ಮಲ್ಲಿಕ್ ಕಾಫರನು ದಕ್ಷಿಣಕ್ಕೆ ದಂಡೆತ್ತಿ ಬಂದು ದ್ವಾರಸಮುದ್ರವನ್ನು ಕೊಳ್ಳೇ ಹೊಡೆದು ವಿಶೇಷವಾಗಿ ಅಲ್ಲಿನ ಐಶ್ವರ್ಯವನ್ನು ದೋಚಿಕೊಂಡು ದೆಹಲಿಗೆ ಹಿಂತಿರುಗಿದನೆಂದು ಇತಿಹಾಸದ ಸಂಗತಿಗಳಿಂದ (ಶಾಸನ) ಗೊತ್ತಾಗುತ್ತದೆ. ಈ ಗೊಂದಲದಲ್ಲಿ ದೊರೆಯನ್ನು ಕೈಸೆರೆ ಹಿಡಿದುಕೊಂಡು ಅವನ ಹಿರಿಯ ಮಗನನ್ನೂ ಜಾಮೀನಾಗಿ ಮಾಡಿಕೊಂಡು ಹೋಗಿದ್ದವರು ೧೩೧೩ರಲ್ಲಿ ಬಿಡುಗಡೆ ಮಾಡಿದರು. ವಿರೂಪಾಕ್ಷ ಪಟ್ಟಣದಲ್ಲಿ ಆತನು ನೆಲೆಸಿ ಬೇರಿಬಿಯಲ್ಲಿ ಹೋರಾಡುವಾಗ್ಗೆ ೧೩೪೨ರಲ್ಲಿ ಮಡಿದನೆಂದು ಗೊತ್ತಾಗಿದೆ.

ಅವನ ಮಗನಾದ ವಿರೂಪಾಕ್ಷ ಬಲ್ಲಾಳನು ೧೩೪೩ರಲ್ಲಿ ರಾಜ್ಯಕ್ಕೆ ಅಭಿಷಿಕ್ತನಾಗಿ ಬರುವ ಕಾಲಕ್ಕೆ ಹೊಯ್ಸಳ ರಾಜ್ಯವು ಕ್ಷೀಣದೆಸೆಗೆ ಬಂದಿತ್ತು. ಆದರೆ ಹೊಯ್ಸಳ ಸಾಮ್ರಾಜ್ಯದಲ್ಲಿ ಅಸ್ತಂಗತನಾಗಿದ್ದ ರವಿಯು ವಿಜಯನಗರ ರಾಜ್ಯದಲ್ಲಿ ಅದೇ ಯದುಸಂತತಿಯ ಮತ್ತು ಚಂದ್ರವಂಶದ ರಾಜಕುಮಾರರೂ ಹಾಗೂ ಹೊಯ್ಸಳರ ಆಶ್ರಿತರೂ ಆಗಿದ್ದ ಹುಕ್ಕಬುಕ್ಕರು ವಿದ್ಯಾರಣ್ಯ ಸ್ವಾಮಿಗಳವರ ಸಹಾಯದಿಂದ ಸ್ಥಾಪಿಸಿದ ವಿಜಯನಗರ ರಾಜ್ಯದಲ್ಲಿ ಉದಯಿಸಿದನು. ಹೀಗಾಗಿ ಕ್ರಿ. ಶ. ೧೩೩೬ರಲ್ಲಿ ತುಂಗಭದ್ರಾ ತೀರದಲ್ಲಿ ಹೊಯ್ಸಳರ ಆದರ್ಶಗಳನ್ನು ಬೆಳಗಿಸಿದ ಮತ್ತು ಅದ್ಭುತರೀತಿಯಲ್ಲಿ ಮುಂದುವರಿಸಿದ ವಿಜಯನಗರ ರಾಜ್ಯಸ್ಥಾಪನೆಯಾಯಿತು.

ಕೆಲವು ಚರಿತ್ರಕಾರರ ರೀತ್ಯಾ ಬಹಳ ವೈಭವದಿಂದ ಆಳಲ್ಪಟ್ಟ ಹೊಯ್ಸಳ ರಾಜ್ಯವು ಕ್ರಿ. ಶ. ೧೪ನೆಯ ಶತಮಾನದ ಮಧ್ಯಭಾಗದಲ್ಲಿ ಶೋಚನೀಯವಾದ ಸ್ಥಿತಿಗೀಡಾಯಿತು. ವಿಜಯನಗರ ಸಾಮ್ರಾಜ್ಯದ ಅಖಂಡ ಭದ್ರತೆಯು ಸಡಿಲಾದ ನಂತರ ಕೆಲವು ಸಂತತಿಯವರು ರಾಜ್ಯವನ್ನಾಳಿದರು. ದ್ವಾರಸಮುದ್ರವು ಕ್ರಿ. ಶ. ೧೪ನೆಯ ಶತಮಾನದಲ್ಲಿ ನಾಶಗೊಳಿಸಲ್ಪಟ್ಟ ನಂತರ, ಬೇಲೂರು ಹಳೇಬೀಡುಗಳನ್ನೊಳಗೊಂಡ ಮಂಜರಾಬಾದು ಪ್ರಾಂತ್ಯವು ಐಗೂರ ಪಾಳೇಗಾರರಿಗೆ ವಿಜಯನಗರದ ಅರವೀಡು ಸಂತತಿಯ ಅರಸುಗಳಿಂದ ವಹಿಸಲ್ಪಟ್ಟಿತೆಂದು ಒಂದು ಐತಿಹ್ಯವಿದೆ. ಆನಂತರ ಇಕ್ಕೇರಿ ಶಿವಪ್ಪನಾಯ್ಕನ ಆಧೀನದಲ್ಲಿ ಕೆಲವು ವರುಷಗಳಿದ್ದು ಸ್ವಲ್ಪ ಕಾಲಾನಂತರ ಆಶ್ರಿತನಾಗಿದ್ದ ೩ನೆ ಶ್ರೀರಂಗರಾಯನಿಗೆ

ಶಿವಪ್ಪ ನಾಯ್ಕನಿಂದ ಕೊಡಲ್ಪಟ್ಟಿತೆಂದು ಪ್ರತೀತಿ ಇದೆ. ಕ್ರಿ. ಶ. ೧೬೯೦ ರಲ್ಲಿ ಬೇಲೂರು—ಮೈಸೂರರಸರ ಆಳ್ವಿಕೆಗೊಳಗಾಯಿತು.

ಈ ರೀತಿಯ ರಾಜಕೀಯ ವೈಶಿಷ್ಟ್ಯವನ್ನು ಪಡೆದಿದ್ದ ಬೇಲೂರು ಇಂದು ಸಣ್ಣ ಪಟ್ಟಣವಾಗಿದೆ. ಆದರೆ ಅಲ್ಲಿನ ದೇವಾಲಯದಲ್ಲಿ ವಿರಾಜಿಸುತ್ತಿರುವ ಹೊಯ್ಸಳರ ಕಾಲದ ವಾಸ್ತುಶಿಲ್ಪ ಮತ್ತು ಅದ್ಭುತ ಕಲಾಕೌಶಲ್ಯ ಅವರ ಭಕ್ತಿಯ ಪ್ರತೀಕವಾಗಿದೆ. ಹಾಗು ಹಿಂದೂ ಸಂಸ್ಕೃತಿಯ ಔನ್ನತ್ಯವನ್ನು ಪ್ರತಿಬಿಂಬಿಸುತ್ತದೆ. ಈ ಕಾರಣಗಳಿಂದಾಗಿ ಬೇಲೂರು ಕಲಾಭಿಜ್ಞರನ್ನೂ ಯಾತ್ರಾರ್ಥಿಗಳನ್ನೂ ಆಕರ್ಷಿಸುತ್ತಿದೆ.

ಪ್ರಕೃತದಲ್ಲಿ ಬೇಲೂರು ದೇವಾಲಯಕ್ಕೆ ಸಂಬಂಧಿಸಿದ ವಿವರಗಳಿಗೇ ಪ್ರಾಧಾನ್ಯತೆ ಕೊಡಲಾಗಿದೆ. ಅಪರಿಚಿತರಾದವರಿಗೆ ಕಲ್ಲುಕಟ್ಟಡದ ಪ್ರಾಕಾರದಿಂದ ಆವೃತವಾಗಿರುವ ದೇವಸ್ಥಾನದ ಮುಂಭಾಗದಲ್ಲಿ ಪೂರ್ವಕ್ಕಿರುವ ಐದು ಅಂತಸ್ತುಗಳುಳ್ಳ ಮಹಾದ್ವಾರದೊಳಗೆ ನೇರವಾಗಿ ಕಾಣುವ ಭವ್ಯವಾದ ಕಲ್ಲುಕಟ್ಟಡವೇ ಮೂಲದೇವಸ್ಥಾನ. ಈ ಮಹಾದ್ವಾರದ ಬಲಕ್ಕೆ ಸ್ವಲ್ಪ ದೂರದಲ್ಲಿಯೇ ಇನ್ನೊಂದು ಪ್ರವೇಶದ್ವಾರವಿದೆ. ಅದಕ್ಕೆ ಆನೆಯ ಬಾಗಿಲೆಂದು ಹೆಸರು. ಅದು ಇತ್ತೀಚಿನ ಬದಲಾವಣೆ ರಥೋತ್ಸವದ ದಿವಸ ವಿನಹ ಮಿಕ್ಕೆಲ್ಲ ದಿನಗಳಲ್ಲೂ ಉತ್ಸವಾದಿಗಳು ಆನೆ ಬಾಗಿಲಿನ ಮೂಲಕವೇ ಬಿಜಯಂಗೈಯುತ್ತವೆ.

## ಪ್ರಾಕಾರದ ಮಹಾದ್ವಾರ

ಇದರ ಪೂರ್ವೇತಿಹಾಸವು ಈ ರೀತಿ ಇದೆ. ಮಹಮ್ಮದ್ ಬಿನ್ ತೊಗಲಕನ ಕಾಲನಲ್ಲಿ ಈ ದೇವಸ್ಥಾನಕ್ಕೆ ಮುಸ್ಲಿಮರು ಧಾಳಿನಡೆಸಿದರು. ತೊಗಲಕನ ದಂಡನಾಯಕನಾದ ಕಲಬುರಗಿಯ ಗಂಗಾಸಾಲಾರನು ದೇವಸ್ಥಾನದ ಮಹಾದ್ವಾರವನ್ನು (ಮರದ ಹೆಬ್ಬಾಗಿಲು) ನಾಶಪಡಿಸಿದನೆಂದು ಗೊತ್ತಾಗಿದೆ. ಸ್ವಲ್ಪ ಕಾಲಾನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಅಧಿಕಾರಿಗಳು ದೇವಸ್ಥಾನದ ಜೀರ್ಣೋದ್ಧಾರ ಕಾರ್ಯ ಮುಗಿಸಿದ್ದಲ್ಲದೆ ಈಗ ಇರುವ ಇಟ್ಟಿಗೆ ಗಾರೆಯ ಗೋಪುರವನ್ನು ಕಟ್ಟಿಸಿದರು. ಬೇಲೂರಿನ ೩ನೆಯ ಶಾಸನದ ಪ್ರಕಾರ ೨ನೆಯ ಹರಿಹರ ಮಹಾರಾಜರ ಮಂತ್ರಿಯಾದ ಗುಂಡ

ದಂಡನಾಯಕರು ೭ ಅಂತಸ್ತಿನ ಮಹಾದ್ವಾರವನ್ನು ಕಟ್ಟಿಸಿ ಅದರ ಮೇಲ್ಭಾಗ ದಲ್ಲಿ ಚಿನ್ನದ ಕಳಶವನ್ನು ಸ್ಥಾಪಿಸಿದರೆಂದು ಗೊತ್ತಾಗುತ್ತದೆ. ೧೯೪೦ ರಿಂದೀ ಚೆಗೆ ಈ ಗೋಪುರದ ಒಳಭಾಗವನ್ನು ಕಲ್ಲು ಮತ್ತು ಸಿಮೆಂಟಿನಿಂದ ಭದ್ರ ಪಡಿಸಿರುತ್ತಾರೆ. ಈ ಗೋಪುರಕ್ಕೆ ೫ ಅಂತಸ್ತುಗಳನ್ನು ಮಾತ್ರ ಉಳಿಸಲಾ ಗಿದೆ ರಾತ್ರಿಕಾಲದಲ್ಲಿ ವಿದ್ಯುದ್ದೀಪಗಳಿಂದ ಅಲಂಕೃತವಾಗಿರುವುದನ್ನು ಬಹು ದೂರದಿಂದ ಕಾಣಬಹುದು.

## ಪ್ರಾಕಾರದ ಒಳಗಿನ ದೇವಾಲಯಗಳು

ಪ್ರಾಕಾರದೊಳಗೆ—ಹಿಂದಿದ್ದಂತೆ ಅಲ್ಲಲ್ಲಿ ತೊಡಕಾಗಿ ಅನೇಕ ಸಣ್ಣ ಸಣ್ಣ ಗುಡಿಗಳು ಭಕ್ತರ ವಿಗ್ರಹಗಳನ್ನಿಡಲು ನಿರ್ಮಿಸಲಾಗಿದ್ದವು. ಅವುಗಳ ಮೇಲೆ ಹಾಳುಗಿಡಗಳು ಬೆಳೆದು ಇನ್ನಿತರ ಕಟ್ಟಡಗಳಿಗೂ ಅಪಾಯ ತರು ವಂತಹ ಔದಾಸೀನ್ಯ ಸ್ಥಿತಿಯಲ್ಲಿದ್ದವು. ಮಾತ್ರವಲ್ಲದೆ ಪರಕೀಯರ ಧಾಳಿ ಯಿಂದ ಇಡೀ ದೇವಾಲಯವೇ ಅಪಾಯಕ್ಕೆ ಗುರಿಯಾಗಿತ್ತು. ಮುಸಲ್ಮಾ ನರ ಆಳಿಕೆಯಲ್ಲಿ ಅದರಲ್ಲೂ ಬಿಜಾಪುರ ಗೌರ್ನರನು ಸುಖಿನಾಸಿಯು ಬಾಗಿ ಲನ್ನು ಹಾಕಿಸಿ ತನ್ನ ದರ್ಬಾರನ್ನು ದೇವಸ್ಥಾನದಲ್ಲಿಯೇ ನಡಿಸಿದನೆಂದು ಗೊತ್ತಾಗಿದೆ. ಆದಾಗ್ಯೂ ಕೂಡ ಅನ್ಯಮತಾವಲಂಬಿಯಾದ ವಿಜಾಪುರದ ಗೌರ್ನರನಿಗೆ ಶಿಲ್ಪಿಕಲೆಯಲ್ಲಿ ಗೌರವವಿದ್ದಂತೆ ಕಾಣುತ್ತದೆ. ಆದರೇನು? ಹಿಂದುಗಳಲ್ಲದವರಿಂದ ದೇವಸ್ಥಾನದ ಕಲಾಕೌಶಲ್ಯಕ್ಕೂ ಹಾಗು ಸಂಪ ತ್ತಿಗೂ ವಿಶೇಷವಾದ ನಷ್ಟವುಂಟಾಗಿದೆ. ಮೂಲದೇವಸ್ಥಾನದ ವಿಮಾನ ಮತ್ತು ಅದರ ಕಳಶದ ವಿಚಾರವಾಗಿಯೇ ಕೆಲವು ಸಂಗತಿಗಳು ಗೊತ್ತಾಗಿವೆ.

ಮೂಲದೇವಸ್ಥಾನದ ಗರ್ಭಗೃಹದ ಮೇಲ್ಭಾಗದಲ್ಲಿ ಈಗ ಹಾಲಿ ಸೌಮ್ಯನಾಯಕಿ ಅಮ್ಮನವರ ಗುಡಿಯು ಮೇಲ್ಭಾಗದಲ್ಲಿರುವ ಗೋಪುರದ ನಮೂನೆಯಲ್ಲಿಯೇ ನಿರ್ಮಿಸಲಾಗಿದ್ದ ದೊಡ್ಡ ಗೋಪುರವಿತ್ತು.

೧೫೫೮ ರಲ್ಲಿ ಖಂಡೇರಾಯ ಸೋಮೇಯ ಡನ್ನಾಯಕರು ರಿಪೇರಿ ಮಾಡಿಸಿದರೆಂತಲೂ ಅನಂತರ ವಿಜಯನಗರದ ದೊರೆಯಾದ ೨ನೇ ಹರಿಹರ ಮಹಾರಾಜರ ಮಂತ್ರಿಯಾದ ಮುದ್ದಪ್ಪನು ೧೩೮೭ ರಲ್ಲಿ ಜೀರ್ಣೋದ್ಧಾರ ಗೊಳಿಸಿ ಚಿನ್ನದ ಕಳಶವನ್ನಿಡಿಸಿದನೆಂತಲೂ ಬೇಲೂರಿನ ೬೩ನೆಯ ಶಾಸನ

ದಿಂದ ಗೊತ್ತಾಗುತ್ತದೆ. ಆದರೆ ಬೇಲೂರಿನ ೬೪ ಮತ್ತು ೬೫ ನೆ ಶಾಸನಗಳಿಂದ ಮೈಸೂರ ಅರಸರಾದ ಕೃಷ್ಣರಾಜ ಒಡೆಯರ್ ಮತ್ತು ಅವರ ಮಂತ್ರಿ ನಂಜರಾಜರು ಇವರುಗಳಿಂದ ೧೭೩೬ ರಲ್ಲೂ ಮತ್ತು ೧೭೭೪ ರಲ್ಲೂ ಚಾಮರಾಜ ಒಡೆಯರ್ ಮತ್ತು ನವಾಬ್ ಬಹದ್ದೂರ್ ಹೈದರಾಲಿಯವರಿಂದ ಗೋಪುರವು ಪುನಃ ಕಟ್ಟಿಸಲ್ಪಟ್ಟು ಅದರ ಮೇಲ್ಭಾಗದಲ್ಲಿ ಮೈಸೂರು ಮಹಾರಾಜರ ಪರವಾಗಿ ಒಂದು ಹೊನ್ನಿನ ಕಳಶವನ್ನು ಸ್ಥಾಪಿಸಲಾಯಿತೆಂದು ವಿಶದ ಪಡುತ್ತದೆ.

ಕಳೆದ ಶತಮಾನದ ಅಂತ್ಯದಲ್ಲಿ ಮೇಲೆ ವಿವರಿಸಲಾಗಿರುವ ಗೋಪುರವನ್ನು ತೆಗೆದು ಗರ್ಭಗೃಹವನ್ನು ಭದ್ರಪಡಿಸಲಾಯಿತು. ಮೊದಲೇ ವಿವರಿಸಿದಂತೆ ೧೯೨೯ ರಿಂದ ೧೯೪೨ ರ ವರೆಗೆ ಕ್ರಮವಾಗಿ ಮೈಸೂರು ಪ್ರಾಚ್ಯ ಸಂಶೋಧನಾ ಇಲಾಖೆಯ ಮುಖ್ಯಾಧಿಕಾರಿಗಳವರ ಸಲಹೆಗಳನ್ನನುಸರಿಸಿ ಬೇಲೂರು ದೇವಸ್ಥಾನದ ಜೀರ್ಣೋದ್ಧಾರ ಸಮಿತಿಯವರು (Renovation committee) ಸುಭದ್ರವಾದ ಸಂರಕ್ಷಣಾ ಕಾರ್ಯವನ್ನು ಕೈಕೊಂಡರು. ಅಂಥಾ ಸಮಿತಿ ೧೯೩೫ ರಲ್ಲಿ ರಚಿಸಲಾಯಿತು. ಮೂಲ ದೇವಸ್ಥಾನದ ಮುಂಭಾಗದಲ್ಲಿದ್ದ ನಾಗನಾಯ್ಕನ ಮಂಟಪ ಮತ್ತು ಪಕ್ಕದಲ್ಲಿಯೇ ದಕ್ಷಿಣಕ್ಕೆ ಸುಮಾರು ೨೦-೩೦ ಅಡಿ ದೂರದಲ್ಲಿದ್ದು-ಕೊಠಾರೋತ್ಸವ, ಕಲ್ಯಾಣೋತ್ಸವ ಇವೇ ಮೊದಲಾದ ಉತ್ಸವಾದಿಗಳಿಗೆ ಉಪಯೋಗಿಸುತ್ತಿದ್ದ ಕಲ್ಯಾಣಮಂಟಪ ಇವುಗಳನ್ನು ತೆಗೆಸಿ ಕ್ರಮವಾಗಿ ಜೀರ್ಣೋದ್ಧಾರ ಕಾರ್ಯವು ಮುಗಿಸಲ್ಪಟ್ಟಿತು. ಈಗ ಹಿಂದೆ ಇದ್ದ ರೀತಿಯಲ್ಲಿನ ಪ್ರತ್ಯೇಕವಾದ ಮಂಟಪಗಳನ್ನಾಗಲೀ ಓಕಳಿ ಗುಂಡಿಗಳನ್ನಾಗಲೀ ನೋಡಲಾಗುವದಿಲ್ಲ. ಆ ಕಾಲದಲ್ಲಿ ದೇವಸ್ಥಾನಕ್ಕೆ ಧರ್ಮಾರ್ಥವಾಗಿ ಒಪ್ಪಿಸಿದ ಒಡವೆಗಳು, ದತ್ತಿ ಬಿಟ್ಟಿರುವ ಭೂಮಿ, ಕಟ್ಟಿಸಿದ ಕಟ್ಟಡಗಳು ಇವುಗಳಿಗೆಲ್ಲಾ ಶಾಸನಗಳಿವೆ.

ದೇವಸ್ಥಾನದ ಪ್ರಾಕಾರದೊಳಗೆ ೧೯೩೩ ನೆ ಇಸವಿಗೂ ಮೊದಲಿದ್ದ ಗುಡಿಗಳನ್ನು ಬದಲಾಯಿಸಿ ಕಟ್ಟಲಾಗಿರುವುದರ ವಿವರ ಈ ರೀತಿ ಇದೆ. ಎಡ ಭಾಗದಲ್ಲಿ ಹಿಂದಿನ ಪಾಕಶಾಲಾ ಮತ್ತು ಉಗ್ರಾಣ (ಯಜ್ಞೇಶ ಭಂಡಾರ ಎಂದು ಕರೆಯಲಾಗಿದೆ) ದ ಜಾಗಗಳಲ್ಲಿ ಪುರಾತನ ಶಿಲಾ ವಸ್ತುಗಳನ್ನೇ ಉಪಯೋಗಿಸಿ ಹಾಲಿ ಹೊಸದಾಗಿ ಮಾಡಿ ಪ್ರತಿಷ್ಠಿಸಿರುವ ರಾಮಾನು



Front view of the Main Temple, Belur

ಬೇಲೂರು ದೇವಸ್ಥಾನದಲ್ಲಿರುವ ಶ್ರೀಚೆನ್ನಕೇಶವ ದೇವಸ್ಥಾನದ ಮುಂಭಾಗ

ಮುಂದಿರುವುದು ಗರುಡಗಂಭ---ಗರುಡ



South west view of the Interior in Belur Temple

ನೈಋತ್ಯದಲ್ಲಿರುವ ನೋಟ — ದೀಪಾಲೆ ಕಂಭ — ಎಡಭಾಗದ ಕೊನೆಯಲ್ಲಿ

ಕಪ್ಪೆಚೆನ್ನಿಗರಾಯದೇವಸ್ಥಾನ—ಪಕ್ಕದಲ್ಲಿ ಅಮ್ಮನವರ ದೇವಸ್ಥಾನ

ಚಾರ್ಯರು, ಇದರ ಪುರಾತನ ಪೀಠದಲ್ಲಿ ಇವರ ಪ್ರಥಮ ಶಿಷ್ಯರೂ ಸೋದರಳಿಯನೂ ಆದ ಮುಕ್ತ ಹಸ್ತರಾದ ದಾಶರಥಿ ಮೊದಲಿಯಾಂಡಾನ್ ವಿಗ್ರಹಗಳೂ ಇವೆ. ಅನಂತರ ಆಳ್ವಾರರುಗಳು, ನಾರಸಿಂಹ, ನವನೀತ ಕೃಷ್ಣ, ಕಾಳಿಂಗಮರ್ದನ, ಲಕ್ಷ್ಮೀನರಸಿಂಹ ವಿಜಯನಗರದ ಅರಸುಗಳ ಕಾಲದಲ್ಲಿ ವ್ಯಾಸರಾಯ ಸ್ವಾಮಿಗಳವರಿಂದ ಪ್ರತಿಷ್ಠಿಸಲ್ಪಟ್ಟ ಪ್ರಾಣದೇವರು (ಮುಖ್ಯಪ್ರಾಣದೇವರೆಂದು ಕರೆಯುವುದು ಸದ್ವೈಷ್ಣವ ಸಂಪ್ರದಾಯ) ಈ ದೇವರುಗಳಿಗೆ ಹಾಗು ಆಚಾರ್ಯರುಗಳಿಗೆ ನವೀನವಾಗಿ ಆಲಯದ ಸಾಲು ಕಟ್ಟಿಸಿ ೧೯೪೦ರಲ್ಲಿ ಪುನಃ ಪ್ರತಿಷ್ಠಿಸಲಾಗಿದೆ. ದೇವಸ್ಥಾನದ ಕಛೇರಿಯಲ್ಲಿ ಉಪ್ಪರಿಗೆಯ ಎಡಭಾಗದಲ್ಲಿದ್ದ ಗಣಪತಿ ಇಟ್ಟಿರುತ್ತಾರೆ. ನೂತನ ಪಾಕ ಶಾಲಾ, ಪಣತ, ಯಾಗಶಾಲಾ ಇವುಗಳು ವೆಂಕಟಾದ್ರಿ ನಾಯಕರಿಂದಾ ಕಟ್ಟಲ್ಪಟ್ಟವುಗಳಾಗಿ ಸ್ವಲ್ಪ ಮಾರ್ಪಾಟಾಗಿರುತ್ತವೆ. ಅದರ ಪಕ್ಕದಲ್ಲಿಯೇ ರಾಮದೇವರ ದೇವಸ್ಥಾನವಿದೆ. ಈ ದೇವಸ್ಥಾನವನ್ನು ಆರವೀಡು ಸಂತತಿಯ ರಾಮರಾಜನು ಕಟ್ಟಿಸಿದನೆಂದು ಗೊತ್ತಾಗುತ್ತದೆ. ಕಟ್ಟಡದಲ್ಲಿ ಕಾಣಬರುವುದು ವಿಜಯನಗರದ ಕಾಲದ ಶಿಲ್ಪಕಲಾ ಸೌಂದರ್ಯ. ಅದರ ವತ್ತಿನ ಪಶ್ಚಿಮದಿಕ್ಕಿನಲ್ಲಿ ಮಂಟಪವು ವಿಜಯನಗರದ ರಾಜರುಗಳ ಕಾಲದಲ್ಲಿ ವೆಂಕಟಾದ್ರಿನಾಯಕರಿಂದಾ ಕಟ್ಟಲ್ಪಟ್ಟ ಶ್ರೀ ಲಕ್ಷ್ಮೀನರಸಿಂಹ ದೇವರ ಪ್ರತಿಷ್ಠೆಯಾಗಿದ್ದು ಈಗ ಅದನ್ನು ಪೂರ್ವದಕ್ಷಿಣ ಕೈಸಾಲೆಗೆ ಬದಲಾಯಿಸಲಾಗಿದೆ. ಈಗ ವಾಹನಮಂಟಪವಾಗಿರುವುದು ವೆಂಕಟಾದ್ರಿನಾಯಕರ ಕಾಲದಲ್ಲಿ ದ್ವಾರಸಮುದ್ರದ ಅರಳೀ ಗಣಪತಿ ಎಂಬ ದೇವಾಲಯವನ್ನು ಕೆಡವಿ ಆಳ್ವಾರರುಗಳಿಗೋಸ್ಕರ ಕಟ್ಟಿದ್ದಾಗಿರುತ್ತದೆ. ಆಳ್ವಾರರುಗಳನ್ನು ಕೈಸಾಲೆಗೆ ಬದಲಾಯಿಸಿ ವಾಹನಗಳನ್ನು ಇಡಲಾಗುತ್ತಿದೆ. ಅಮ್ಮನವರ ದೇವಸ್ಥಾನಗಳು, ವೀರ ನಾರಾಯಣ ದೇವಸ್ಥಾನ, ಇವುಗಳು ಮೊದಲಿದ್ದಂತೆಯೇ ಇವೆ. ವಿವರಗಳನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

ಮೂಲ ದೇವಸ್ಥಾನದ ಮತ್ತು ಅದರ ಸುತ್ತಲೂ ಇರುವ ಕಟ್ಟಡಗಳ ಬಗ್ಗೆ ನಿರ್ದಿಷ್ಟವಾದ ವಿವರಗಳು ಶ್ರೀ ವಿಜಯ ನಾರಾಯಣ ಸ್ವಾಮಿಯನ್ನು ಪ್ರತಿಷ್ಠಿಸಲಾಗಿರುವ ಪೀಠದಲ್ಲಿರುವ ಮತ್ತು ನವರಂಗ ಮಂಟಪದ ಉತ್ತರ ಪಾರ್ಶ್ವಕ್ಕಿರುವ ಪಶ್ಚಿಮದಿಕ್ಕಿನ ಗೋಡೆಯಲ್ಲಡಕವಾಗಿರುವ ಶಾಸನಗಳಿಂ

ದಲೂ ವಿಷ್ಣುವರ್ಧನನು ಕೇಶವ ದೇವಾಲಯವನ್ನು ಕಟ್ಟಿಸಿ ಕ್ರಿ. ಶ. ೧೧೧೭ ರಲ್ಲಿ ವಿಜಯ ನಾರಾಯಣನನ್ನು ಪ್ರತಿಷ್ಠಾಪನೆ ಮಾಡಿಸಿದನೆಂದು ಖಲನೆಯ ಶಾಸನದಿಂದ ಸ್ಥಿರಪಡುತ್ತದೆ. ಈ ಶಾಸನ ಮತ್ತು ಅನೇಕ ತಾಮ್ರಶಾಸ ಗಳಲ್ಲಿ ದೇವಾಲಯವನ್ನು ಕಟ್ಟಿಸಿದ ರಾಜನ, ಆತನ ಪಟ್ಟಮಹಿಷಿಯು, ದೇವಾಲಯದ ಬಗ್ಗೆ ಮತ್ತು ದೇವರನ್ನು ಕುರಿತು ಸುಂದರವಾದ ಹಳೆಗನ್ನಡ ಶೈಲಿಯಲ್ಲಿ ಗದ್ಯ ರೂಪದಲ್ಲಿ ವರ್ಣನೆ ಮತ್ತು ಪ್ರಶಂಸಾತ್ಮಕ ನುಡಿಗಳು ಉಲ್ಲೇಖಿತವಾಗಿವೆ.

## ಜಕಣಾಚಾರಿ

ಈ ದೇವಸ್ಥಾನವನ್ನು ಕಟ್ಟಿದ ಶಿಲ್ಪಿಗಳ ಬಗ್ಗೆ ಕೆಲವು ದಂತ ಕಥೆಗಳಿವೆ. ಕೆಲವರು ಹೆಸರುವಾಸಿಯಾದ ಕರ್ನಾಟಕ ಶಿಲ್ಪಿಗಳಾದ ಜಕಣಾಚಾರಿ ಮತ್ತು ಆವನ ಮಗ ಡಂಕಣಾಚಾರಿ ಇವರುಗಳು ನಮೂನೆಯನ್ನು ಹಾಕಿ, ಕಟ್ಟಡ ವನ್ನು ಕಟ್ಟಿ, ಅದರ ಮುಖ್ಯ ಕಲಾಮೂರ್ತಿಗಳನ್ನು ಒಂದೇ ಕೈಯಿಂದಾ ಕೊರೆದರೆಂದು ಹೇಳುತ್ತಾರೆ. ಅಂತೆಯೇ ಸಾಮಾನ್ಯವಾಗಿ ಹೊಯ್ಸಳರ ಕಾಲದ ದೇವಾಲಯಗಳನ್ನು ಜಕಣಾಚಾರಿ ಕಟ್ಟಿಡ ಎಂದು ಹೇಳುವುದು ರೂಢಿಯಲ್ಲಿದೆ. ಕೆಲವರು ಏಳು ರಾತ್ರಿಗಳಲ್ಲಿ ಈ ದೇವಸ್ಥಾನಗಳು ಕಟ್ಟಲ್ಪಟ್ಟ ವೆಂದು ತಿಳಿದಿರುತ್ತಾರೆ. ಇಂಥಾ ನಂಬಿಕೆಗಳಿಗೆ ಸ್ಥಳ ಮಹಾತ್ಮೆ ಅಲ್ಲದೆ ಬೇರೆ ಆಧಾರವಿಲ್ಲ. ಸ್ಥಳ ಮಹಾತ್ಮೆಯನ್ನಾದರೂ ಕೂಡ ಏತಕ್ಕೆ ನಂಬಬಾರದು? ಕೆಲವು ಸಂಗತಿಗಳು ಸಾಧಾರ ಭೂತವಾಗಿವೆ.

ತುಮಕೂರು ತಾಲ್ಲೂಕಿನ ಕೈದಾಳವೆಂಬ ಗ್ರಾಮವೇ ಜಕಣಾಚಾರಿಯ ಜನ್ಮಸ್ಥಳ. ಅವನು ಅನೇಕ ಕಡೆ ಕೆಲಸಮಾಡಿ ಹೆಸರುವಾಸಿಯಾದನು. ಕಡೆಗೆ ಬೇಲೂರು ದೇವಾಲಯ ಕಟ್ಟುವಲ್ಲಿ ಬಂದು ಕೆಲಸ ಮಾಡುತ್ತಿದ್ದನು. ಇವನ ಮಗನಾದ ಡಂಕಣಾಚಾರಿಯು ಅಜ್ಞಾತವಾಗಿ ಬಂದು ಬೇಲೂರಿನಲ್ಲಿ ಆಗ ತಾನೆ ಕೆತ್ತಿದ್ದ ಚೆನ್ನಿಗರಾಯನ ವಿಗ್ರಹದಲ್ಲಿ ದೋಷವಿದೆಯೆಂದು ಛಲ ಹಿಡಿದನು. ಅದರಂತೆಯೇ ಕಪ್ಪೆ, ನೀರೂ ಮತ್ತು ಮರಳೂ ಬಂದಿತಾದ ಕಾರಣ ವಿಗ್ರಹವು ಪೂಜೆಗೆ ಅನರ್ಹವೆಂದು ನಿರ್ಧರಿಸಲಾಯಿತು. ಜಕಣಾ ಚಾರಿಯು ತಾನು ಕೊರೆದಂಥಾ ವಿಗ್ರಹದಲ್ಲಿ ದೋಷವಿದೆಯೆಂದು ಸ್ಥಿರಪಟ್ಟಲ್ಲಿ

ತನ್ನ ಕೈಯನ್ನೇ ಕತ್ತರಿಸಿಕೊಳ್ಳುವುದಾಗಿ ಪ್ರತಿಜ್ಞೆತೊಟ್ಟನು. ಇಂಥಾ ಪರೀಕ್ಷೆಯಲ್ಲಿ ಅವಮಾನಿತನಾದ ಜಕಣಾಚಾರಿಯು ತನ್ನ ಬಲಗೈಯನ್ನು ಕತ್ತರಿಸಿಕೊಂಡನು. ಅನಂತರ ಡಂಕಣಾಚಾರ್ಯು ತನ್ನ ಮಗನೆಂದು ಗೊತ್ತಾಯಿತು. ವಿಗ್ರಹದಲ್ಲಿ ದೋಷವನ್ನು ಪತ್ತೆಮಾಡಲು ಎಲ್ಲಾ ಭಾಗಕ್ಕೂ ಬಳಿಯಲ್ಪಟ್ಟ ಗಂಧವು ಒಣಗಿದರೂ ಹೊಕ್ಕಳಿನ ಭಾಗದಲ್ಲಿ ಒಣಗದೆ ಇತ್ತು. ಅಲ್ಲಿ ಪೊಳ್ಳಾದ ಭಾಗದಲ್ಲಿ ಕಪ್ಪೆ ಮುಂತಾದವು ಇದ್ದವು.

ಕೆಲವು ದಿನಗಳ ನಂತರ ದೇವಶಿಲ್ಪಿಯಾದ ಜಕಣಾಚಾರಿಗೆ ಒಂದು ಸ್ವಪ್ನದಲ್ಲಿ ತನ್ನ ಜನ್ಮಸ್ಥಳವಾದ ಕ್ರೀಡಾಪುರ (ಈಗಿನ ಕೈದಾಳ) ದಲ್ಲಿ ಕೇಶವದೇವಾಲಯ ಕಟ್ಟಿಸಲು ಅಪ್ಪಣೆಯಾಯಿತು ಅದರಂತೆ ಕೈದಾಳ ದಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿದ ನಂತರ ಬಲಗೈ ಬಂದಿತೆಂದು ಹೇಳಲಾಗಿದೆ. ಆದರಿಂದಾಗಿ ಆ ಸ್ಥಳಕ್ಕೆ ಕೈದಾಳವೆಂದು ಹೆಸರಾಯಿತು.

## ಶಿಲ್ಪಿಗಳ ಪಡೆ

ಕೆಲವರು ಇವೆಲ್ಲವನ್ನು ನಂಬುವುದಿಲ್ಲ. ಮಾತ್ರವಲ್ಲದೆ, ಒಬ್ಬನೇ ಶಿಲ್ಪಿಯು ಕರ್ಣಾಟಕದ ನಾನಾಭಾಗಗಳಲ್ಲಿ ಕಲ್ಲಿನಲ್ಲಿ ಸುಂದರವಾದ ಪ್ರತಿಮೆ ಅಥವಾ ವಿಗ್ರಹಗಳನ್ನು ಅಚ್ಚಿನ ಬೊಂಬೆಗಳಂತೆ ಕೊರೆದಿರುವುದು ಅಸಂಭವ ವೆನ್ನುತ್ತಾರೆ. ಏತಕ್ಕೆಂದರೆ ಈ ಶಿಲಾವಿಗ್ರಹಗಳನ್ನು ಕೊರೆದಿರುವ ಶಿಲ್ಪಿ ಗಳು ತಮ್ಮ ಹೆಸರುಗಳನ್ನು ಕೂಡ ಪೀಠದಲ್ಲಿ ಸ್ಪಷ್ಟವಾಗಿ ಕೆತ್ತಿರುತ್ತಾರೆ. ಅವರುಗಳ ಹೆಸರುಗಳಲ್ಲಿ ಬಲ್ಲಿಗ್ರಾಮ ಅಥವಾ ಬೆಳಗಾವಿ (ಷಿಕಾರಿಪುರ ತಾಲ್ಲೂಕಿನಲ್ಲಿದೆ)ಯ ದಾಸೋಜ, ಅವನ ಮಗ ಚಾವನ, ಗದುಗಿನ ಸ್ವಯಂಭು, ತ್ರಿಕೂಟೇಶ್ವರನ ಶಿಲ್ಪಿ ನಾಗೋಜ, ಚಿಕ್ಕಹಂಪ, ಮಲ್ಲಿಯಣ, ಪದಾರಿ ಮಲ್ಲೋಜ ಕೆಂಚಮಲ್ಲಿಯಣ್ಣ, ಲಕ್ಕುಂಡಿಯ ಮಸದ ಇವುಗಳಿವೆ.

ಇವರುಗಳು ಸಾಮಾನ್ಯ ಶಿಲ್ಪಿಗಳಲ್ಲ. ಕಾಡುಕಲ್ಲನ್ನು ಹವಣಿಸಿಕೊಂಡು ಸುಂದರವಾಗಿ ವಿಗ್ರಹಗಳನ್ನಾಗಿ ಕಡೆದು ಪೂಜೆಗೂ, ಧ್ಯಾನಕ್ಕೂ, ಕಣ್ಣಿಗೆ ಸಂತೋಷವನ್ನುಂಟುಮಾಡುವ ಮತ್ತು ಕಲಾಕೋವಿದರ ಸೌಂದರ್ಯಭಾವನೆ ಗಳಿಗೆ ಮೂಲ ವಸ್ತುವನ್ನಾಗಿ ಮಾಡಿದವರ ಸ್ಥಾನ ಮತ್ತು ಕುಶಲತೆ ಎಷ್ಟು ಹಿರಿದಾದುದು ಎಂದು ವಾಚಕರೇ ನಿಶ್ಚಯಿಸಲಿ. ನಾಡಿನ ಉನ್ನತ ಕವಿ

ಗಳಂತೆ ಅವರೂ ಕೂಡ ಬಿರುದುಗಳನ್ನು ಹೊಂದಿದ್ದಾರೆ. ಇಲ್ಲಿ ಅವರುಗಳೇ ಬಿರುದುಗಳನ್ನೂ ಕೆತ್ತಿಕೊಂಡಿದ್ದಾರೆ. ಆ ಬಿರುದುಗಳ ವೈಖರಿಯನ್ನು ನೋಡಿದಲ್ಲಿ ಅವರ ಆದರ್ಶವು ಎಷ್ಟು ಉನ್ನತವಾಗಿತ್ತೆಂದು ಗೊತ್ತಾಗುತ್ತದೆ. ಚಾವನನು 'ಬಿರುದರೂವಾರಿ ಮದನ ಮಹೇಶ' ಎಂದೂ, ಚಿಕ್ಕ ಹಂಪನು 'ಮಚ್ಚಂಪರೂವಾರಿಗಳ ಗಂಡ' ಎಂದೂ, ಮಲ್ಲಿಯಣನು—ತಲಕಾಡನ್ನು ಗೆದ್ದ ಮಹಾ ಮಂಡಲೇಶ್ವರ, ತ್ರಿಭುವನ ಮಲ್ಲ ಭುಜಬಲ ವೀರಗಂಗ ಹೊಯ್ಸಳದೇವನೆಂದು ಬಿರುದಾಂಕಿತನಾದ ವಿಷ್ಣುವರ್ಧನನ ಶಿಲ್ಪಿ 'ರೂವಾರಿ ಪುಲಿ' ಅಥವಾ 'ಶಿಲ್ಪಿಗಳ ಹುಲಿ' ಎಂದು ಕರೆದುಕೊಂಡಿದ್ದಾನೆ. ಇನ್ನು ಕೆಲವರು ಕಲಿಯುಗದ 'ವಿಶ್ವಕರ್ಮ' ಆನೆಗಳೆಂದು ಬಿರುದಾಂಕಿತರಾದ ಶಿಲ್ಪಿಗಳ ಸಿಂಹ ಎಂದು ಕರೆದುಕೊಂಡಿರುತ್ತಾರೆ. ಈ ರೀತಿಯಾಗಿ ಕರ್ನಾಟಕದ ಶಿಲ್ಪಿಗಳಲ್ಲಿ ಸಂಪೂರ್ಣ ಸ್ವಾಮಿನಿಷ್ಠೆ, ಅಥವಾ ರಾಜಭಕ್ತಿ, ತಮ್ಮ ಕುಲ ಕಸುಬಿನಲ್ಲಿ ಅದ್ವಿತೀಯವಾದ ಪ್ರೌಢಿಮೆ, ತಮ್ಮದೇ ಆದ ಅಗ್ರಸ್ಥಾನ ಪಡೆಯಬೇಕೆಂಬ ಮಹದಾಕಾಂಕ್ಷೆ ಇವುಗಳು ಪ್ರಬಲವಾಗಿದ್ದವೆಂದು ಗೊತ್ತಾಗುತ್ತದೆ. ಆ ಕಾಲದ ರಾಜರಂತೆಯೇ ಶಿಲ್ಪಿಗಳು ಕೂಡ ಬಿರುದುಗಳನ್ನು ಬಹುವಾಗಿ ಅಪೇಕ್ಷೆ ಪಡುತ್ತಿದ್ದುದರಲ್ಲಿ ಆಶ್ಚರ್ಯವೇನಿಲ್ಲ,

ಮೇಲೆ ವಿವರಿಸಿದ ಶಿಲ್ಪಗಳು ಕನ್ನಡದೇಶದ ಉತ್ತರಕ್ಕೂ ಪಶ್ಚಿಮಕ್ಕೂ ವಿಸ್ತರಿಸಿದ್ದ ಚಾಳುಕ್ಯ ದೇಶದಿಂದ ಬಂದಿರಬೇಕೆಂದು ವಿಶದ ಪಡುತ್ತದೆ. ವಿಷ್ಣುವರ್ಧನನ ರಾಣಿಯಾದ ಶಾಂತಲಾದೇವಿಯೂ ಕೂಡ ಸಂಗೀತ, ಸಾಹಿತ್ಯ ಲಲಿತಕಲೆಗಳು—ಇವುಗಳಲ್ಲಿ ವಿಶೇಷ ಪರಿಣಿತಳಾಗಿದ್ದ ಕಾರಣದಿಂದ ತನ್ನ ತೌರೂರಾದ ಬೆಳ್ಳಿಗಾಂವಿಯಿಂದ ಚತುತರರಾದ ಕೆಲವು ಶಿಲ್ಪಿಗಳನ್ನು ಕರೆತಂದಳೆಂದು ಕೆಲವು ಚರಿತ್ರಕಾರರು ಅಭಿಪ್ರಾಯಪಟ್ಟಿರುತ್ತಾರೆ. ಹೊಯ್ಸಳರ ಶಿಲ್ಪಕಲೆಯು ಉತ್ತರ ಕರ್ನಾಟಕದಲ್ಲಿಯೂ ಕೂಡ ವ್ಯಾಪಿಸಿತ್ತು. ಗದುಗಿನಲ್ಲಿ ವೀರನಾರಾಯಣ ದೇವಾಲಯವನ್ನು ಕಟ್ಟಿಸಿದ ಹೊಯ್ಸಳ ವಿಷ್ಣುವರ್ಧನನು ಅಲ್ಲಿನ ಶಿಲ್ಪಿಗಳನ್ನು ಬೇಲೂರಿಗೆ ಕರೆಸಿದ್ದರೆ ಆಶ್ಚರ್ಯವೇನಿಲ್ಲ ವಿಷ್ಣುವರ್ಧನನು ವಿಜಯನಾರಾಯಣ ದೇವರನ್ನು ಪ್ರತಿಷ್ಠಿಸಿದನು. ಅವನ ಮುಖ್ಯ ರಾಣಿಯಾದ ಶಾಂತಲಾದೇವಿಯು ಕಪ್ಪೆಚೆನ್ನಿಗರಾಯ ದೇವಸ್ಥಾನವನ್ನು ಕಟ್ಟಿಸಿದಳು. ವಿಗ್ರಹದಲ್ಲಿ ದೋಷವಿದೆಯೆಂಬ ಸಂದಿಗ್ಧ ಪರಿಸ್ಥಿತಿಯಲ್ಲಿ

ಕಪ್ಪೆಯೂ, ನೀರೂ ಮತ್ತು ಮರಳೂ ಬಂದಿದ್ದರಿಂದ ಪೂಜೆ ನಡೆಯುತ್ತಿರಲಿಲ್ಲ ಈಗ್ಗೆ ಕೆಲವು ವರುಷಗಳಿಂದ ಈ ದೇವಸ್ಥಾನದ ಮೂಲ ವಿಗ್ರಹಕ್ಕೂ ವಿಧಿವತ್ತಾಗಿ ಪೂಜೆ ನಡೆಯುತ್ತಿದೆ. ಶಿಲ್ಪಕಲೆಗೆ ಸಂಬಂಧಿಸಿದ ವಿವರ ಪ್ರತ್ಯೇಕವಾಗಿ ಕೊಡಲಾಗಿದೆ.

## ಶ್ರೀ ಕೇಶವ ದೇವಾಲಯ

ಬೇಲೂರಿನಲ್ಲಿರುವ ಚೆನ್ನಕೇಶವ ದೇವಾಲಯವು ಹೊಯ್ಸಳರ ವಾಸ್ತು ಶಿಲ್ಪದ ನಮೂನೆಯ ಕಟ್ಟಡಗಳಲ್ಲೆಲ್ಲಾ ಅತ್ಯುತ್ತಮವಾದುದಾಗಿದೆ. ಅವರ ಶಿಲ್ಪಕಲಾ ಪ್ರತಿಭೆಯು ಅತ್ಯಂತ ಉನ್ನತಮಟ್ಟದಲ್ಲಿ ಕಾಣಬರುತ್ತದೆ. ಚಾಲುಕ್ಯರ ವಾಸ್ತು ಶಿಲ್ಪದ ನಮೂನೆಯಲ್ಲಿ ಕ್ರಿ. ಶ ೧೧ನೆಯ ಶತಮಾನದ ಮಧ್ಯಭಾಗದಿಂದ ಮುಂದುವರಿದು ಪ್ರತ್ಯೇಕವಾಗಿ ಅದೇ ಒಂದು ರೀತಿಯ ವೈಶಿಷ್ಟ್ಯದಿಂಧ ಅಭಿವೃದ್ಧಿ ಹೊಂದಿತು. ವಾಸ್ತು ಶಿಲ್ಪದಲ್ಲಿ ಪ್ರವೀಣರೆನಿಸಿಕೊಂಡಿದ್ದ ಕೆಲವರು ಈ ವಿಚಾರದಲ್ಲಿ ತಮ್ಮದೇ ಆದ ಅಭಿಪ್ರಾಯ ಸಮರ್ಥನೆಯಿಂದ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ್ದಾರೆಂದು ಭಾವಿಸಲು ಅವಕಾಶವುಂಟಾಗಿದೆ. ಕೀರ್ತಿಶೇಷರಾದ ರಾವ್‌ಬಹದ್ದೂರ್ ಆರ್. ನರಸಿಂಹಾ-ಚಾರ್ಯರ ರೀತ್ಯಾ ಹೊಯ್ಸಳರ ಕಾಲದ್ದೇ ಪ್ರತ್ಯೇಕ ವಾಸ್ತುಶಿಲ್ಪವೆಂದು ಪರಿ-ಗಣಿಸಲ್ಪಡಬೇಕೆಂದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಫರ್ಗುಸನ್ ಎಂಬ ಇತಿಹಾಸಪ್ರಾಜ್ಞರು ಚಾಳುಕ್ಯರ ರೀತಿಯ ವಾಸ್ತುಶಿಲ್ಪವೇ ಹೊಯ್ಸಳರ ಕಾಲದಲ್ಲಿ ತನ್ನ ಔನ್ನತ್ಯವನ್ನು ಅಥವಾ ಸಂಪೂರ್ಣತೆಯ ಎಲ್ಲೆಯನ್ನು ಕಂಡುಕೊಂಡಿತೆಂದು ಅಭಿಪ್ರಾಯವುಳ್ಳವರಾಗಿದ್ದಾರೆ. ಆದರೆ ಇಡೀ ಕರ್ಣಾಟಕದಲ್ಲಿ ಅದರಲ್ಲೂ ಮೈಸೂರನ್ನೊಳಗೊಂಡ ಉತ್ತರ ಕರ್ನಾಟಕದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯದಿಂದ ಕೂಡಿರುವ ಅಂದರೆ ಬೊಯ್ಸಳಲಾಂಛನವಾದ 'ಹೊಯ್ಸಸಳ (ಪೊಯ್ ಸಳ) ವಿಗ್ರಹಗಳು, ಕಲ್ಲು ಕಂಭಗಳ ಕೆತ್ತನೆಯ ಕೌಶಲ್ಯ, ವಿಶೇಷವಾಗಿ ರಾಮಾಯಣ, ಮಹಾಭಾರತ ಭಾಗವತದ ವೀರಾಗ್ರಣಿಗಳು ಮತ್ತು ಭಗವದ್ಭಕ್ತರುಗಳ ವಿಗ್ರಹಗಳು ಆಗಿನ ಕಾಲದ ದ್ಯೂತ, ಸಮರ, ಕಾಳಗ, ಒಡ್ಡೋಲಗ—(ರಾಜರುಗಳ ದರ್ಬಾರುಗಳು) ಇವುಗಳನ್ನು ತೋರಿಸುವ ದೃಶ್ಯಗಳು ಕಾಣಬರುವುದರಿಂದ

ಹೊಯ್ಸಳರ ವಾಸ್ತುಶಿಲ್ಪ ಮತ್ತು ಕಲೆ ಎಂದು ಕರೆಯುವುದರಲ್ಲಿ ಔಚಿತ್ಯವು ಸಂಪೂರ್ಣ ಇರುತ್ತದೆ

## ದೇವಾಲಯದ ರಚನೆ

ಕೇಶವ ದೇವಾಲಯವು ಸುಮಾರು ೪೪೩ ಅಡಿ ೬ ಅಂಗುಲ ಉದ್ದ ೩೯೩ ಅಡಿ ಅಗಲವುಳ್ಳ ಪ್ರಾಕಾರದೊಳಗೆ (ಪೌಳಿ) ಇದೆ. ಆದರೂ ಇದೇ ಪ್ರಾಕಾರದೊಳಗೆ ಹೊಸದಾಗಿ ಬದಲಾಯಿಸಿ ಕಟ್ಟಿರತಕ್ಕ ಚಿಕ್ಕ ಚಿಕ್ಕ ಗುಡಿಗಳ ಸಾಲುಗಳೂ, ಕಪ್ಪೆಚೆನ್ನಿಗರಾಯನ ಗುಡಿ, ಅಮ್ಮನವರ ಗುಡಿ, ವಿಜಯನಗರ ಮಂಟಪ, ವೀರನಾರಾಯಣ ಗುಡಿ ಹಿಂದಿನ ಪಾಕಶಾಲೆ, ಆಂಡಾಳ್ ದೇವಸ್ಥಾನ, ಕೈಸಾಲೆ, ವಾಸುದೇವ ತೀರ್ಥ. ನೂತನ ಕಲ್ಲುಮಂಟಪ ಇವುಗಳಿಲ್ಲದರಿಂದ ಮೂಲ ದೇವಾಲಯವು ಆವೃತವಾಗಿದೆ.

ಮೂಲ ದೇವಾಲಯವನ್ನು ನೋಡಲು ಗೋಪುರದ ಮಹಾದ್ವಾರದಿಂದ ಪ್ರವೇಶಿಸಿದರೆ ಮೊದಲು ಗರುಡಗಂಭವೂ ಗರುಡನ ವಿಗ್ರಹವೂ ಕಾಣಬರುತ್ತದೆ. ಮುಂದುವರಿದಲ್ಲಿ ಅಂದರೆ ಹೆಬ್ಬಾಗಿಲಿನಿಂದ ೧೦೦ ಅಡಿಗಳಷ್ಟು ನೇರವಾಗಿ ಪಶ್ಚಿಮಕ್ಕೆ ಹೋದರೆ ಮೂಲ ದೇವಸ್ಥಾನವನ್ನು ನೋಡಲು ಕಲ್ಲುಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. ಇಂಥಾ ಮೆಟ್ಟಿಲುಗಳು ಐದು ಅಡಿ ಎತ್ತರದ ಸುಭದ್ರವಾದ ಕಲ್ಲು ಕಟ್ಟಡದ ಗದ್ದುಗೆಯನ್ನು (Platform) ಹತ್ತಲು ನಿರ್ಮಿಸಲಾಗಿದೆ. ಮೆಟ್ಟಿಲುಗಳನ್ನು ಹತ್ತಿದರೆ ಮೂಲ ದೇವಾ-ಲಯವು ಸಿಗುತ್ತದೆ. ಅಸ್ಥಿಭಾರದಂತಿರುವ ಗದ್ದುಗೆಯು ಅಥವಾ ಜಗುಲಿಯು ಮೇಲೆ ವೀಕ್ಷಿತರು ಅಥವಾ ಭಕ್ತಾದಿಗಳು ಪ್ರದಕ್ಷಿಣೆಗೋಸ್ಕರ ತಿರುಗಾಡುವಷ್ಟು ಸುಮಾರು ೧೦ ಅಡಿ ಜಾಗವನ್ನು ಬಿಟ್ಟು ಪುನಃ ಒಂದು ಅಸ್ಥಿಭಾರ ಪೀಠ ಅಥವಾ ಕಟ್ಟೆಯ ಮೇಲೆ ದೇವಾಲಯವನ್ನು ನಿರ್ಮಿಸಲಾಗಿದೆ. ಮೂರು ದ್ವಾರಗಳಿರುವ ಈ ದೇವಾಲಯವನ್ನು ಕೆಲವು ವಿಶೇಷ ಸಂದರ್ಭಗಳಲ್ಲದೆ ಪೂರ್ವ ಡ್ವಾರದಿಂದಲೇ ಪ್ರವೇಶಿಸಬೇಕು. ದೇವಾಲಯದ ಒಳಗೆ ಹೋಗಲು ಪುನಃ ೪ ಅಡಿಯಷ್ಟು ಎತ್ತರದ ಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. ಇಂಥ ದೇವಾಲಯವು ೧೪೦ ಅಡಿ ಉದ್ದವೂ ೧೬೦ ಅಡಿ ಅಗಲವೂ ಇದೆ. ಮೊದಲಿನ ಜಗುಲಿಯು ಆಕಾರದಲ್ಲಿ ಮೂಲ ದೇವಸ್ಥಾನದ ನಮೂನೆಯ

ನ್ನನುಸರಿಸಿಯೇ ಇದೆ. ಶಿಲ್ಪಶಾಸ್ತ್ರಜ್ಞರ ರೀತ್ಯಾ ಪರೀಕ್ಷಿಸುವುದಾದರೆ ಗರ್ಭಗೃಹವು ನಕ್ಷತ್ರಾಕೃತಿಯನ್ನು ಹೋಲುತ್ತದೆ. (Star shaped Garbhagriha) ಹೊರಭಾಗದಿಂದ ನೋಡಿದಲ್ಲಿ ಮಾತ್ರ, ಈ ರಚನಾಕ್ರಮವು ಗೋಚರವಾಗುತ್ತದೆ. ಸುಖನಾಸಿಯಿಂದ ಮುಂದುವರಿದು ಕಟ್ಟಿರತಕ್ಕ ನವರಂಗ ಮಂಟಪವು ಪಗಡೆಹಾಸಿನ ಮೂರು ಮನೆಯಂತಿದೆ. ಅಥವಾ ಕ್ರಿಶ್ಚಿಯನ್ನರ ಕ್ರಾಸನ್ನು ಹೋಲುತ್ತದೆ. ಈ ರೀತಿಯ ರಚನಾ ಕೌಶಲ್ಯ ದಿಂದಾಗಿ ಪೂರ್ವದ್ವಾರದಿಂದ ನೇರವಾಗಿ ಬೆಳಕೂ, ಅಕ್ಕಪಕ್ಕದಲ್ಲಿ ಛಾಯೆಯ ಬೆಳಕೂ ನೆರಳೂ ಬರಲು ಅವಕಾಶವುಂಟಾಗಿದೆ. ನವರಂಗ ಮಂಟಪದ ಹೊರ ಭಾಗವು ಎರಡನೆಯ ಹಂತದ ಮಜಲಿನಿಂದಾ ಕೂಡ ಅನೇಕ ಕಲ್ಲು ದಿಮ್ಮಿ ಗಳಿಂದಾ ಭದ್ರಪಡಿಸಲ್ಪಟ್ಟು ಅದರ ಮೇಲೆ ದೊಡ್ಡ ದೊಡ್ಡ ರಂಧ್ರಯುಕ್ತ ವಾದ (ಜಾಲಂಧ್ರದ ಕಿಡಕಿಗಳು) ಕಲ್ಲು ಕಿಡಕಿಗಳಿಂದ ಮುಚ್ಚಲ್ಪಟ್ಟಿದೆ. ಅಥವಾ ರಕ್ಷಿಸಲ್ಪಟ್ಟಿದೆ. ಹೀಗೆ ಕಟ್ಟಿರತಕ್ಕ ಕಟ್ಟಡದಲ್ಲಿ ಅಸಂಖ್ಯಾತ ಶಿಲಾಮೂರ್ತಿಗಳನ್ನೂ ಮತ್ತು ಜನಜೀವನದ ವಿಗ್ರಹಗಳನೇಕವಾಗಿ ನಾನಾ ಭಾವ ಭಂಗಿಯಲ್ಲಿರುವಂತೆ ಅಲಂಕರಿಸಲಾಗಿರುವುದನ್ನು ಕಾಣಬಹುದು. ನವರಂಗದ ಹೊರಗಿನ ನೋಟವಷ್ಟೇ ಅಲ್ಲದೆ ಗರ್ಭಗುಡಿಯ ಹೊರ ಭಾಗವು ಅನೇಕ ವಿಗ್ರಹಗಳಿಂದ ಅಲಂಕೃತವಾಗಿದೆ. ಮೊದಲು ದೇವಾಲಯವನ್ನು ಕಟ್ಟಿದಾಗ್ಗೆ ಈಗಿರುವಂತೆ ನವರಂಗಕ್ಕೆ ಬಾಗಿಲು—ಕಿಟಕಿಗಳು ಇರಲಿಲ್ಲ. ಈಗಿನ ಬದಲಾವಣೆಗಳನ್ನು ವಿಷ್ಣುವರ್ಧನನ ಮೊಮ್ಮಗನಾದ ೨ನೆಯ ಬಲ್ಲಾಳ ರಾಜನು (ಕ್ರಿ.ಶ. ೧೧೭೩–೧೨೨೦) ಮಾಡಿಸಿದನೆಂದು ಬೇಲೂರಿನ ೭೨ನೆಯ ಶಾಸನದಿಂದ ಗೊತ್ತಾಗುತ್ತದೆ.

ಮೂಲ ದೇವಸ್ಥಾನಕ್ಕೆ ಪೂರ್ವದ ಬಾಗಿಲಲ್ಲದೆ ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲೂ ದ್ವಾರಗಳಿವೆ. ದಕ್ಷಿಣ ದ್ವಾರವನ್ನು ಶುಕ್ರವಾರದ ಬಾಗಿಲೆಂದೂ ಉತ್ತರದ ದ್ವಾರವನ್ನು ಸ್ವರ್ಗದ ಬಾಗಿಲೆಂದೂ ಕರೆಯುತ್ತಾರೆ. ಈ ದ್ವಾರಗಳನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ತೆರೆಯುತ್ತಾರೆ. ಇವು ಗಳಲ್ಲೆಲ್ಲಾ ಪೂರ್ವದ್ವಾರವು ಅತ್ಯಂತ ಸುಂದರವಾದ ಕಲಾಕೌಶಲ್ಯದಿಂದ ಶೋಭಿಸುತ್ತದೆ.

ಉಭಯ ಪಾರ್ಶ್ವಗಳಲ್ಲೂ ಹೊಯ್ಸಳರ ಲಾಂಛನದಿಂದೊಡಗೂಡಿದ

5

(ಸಳನು ಹುಲಿಯನ್ನು ಹೊಡೆಯುತ್ತಿರುವುದು) ವಿಗ್ರಹಗಳು ಕೆತ್ತಲ್ಪಟ್ಟು ಸ್ಥಾಪಿಸಲ್ಪಟ್ಟಿವೆ. ಬಾಗಿಲುವಾಡದ ಆಗ್ನೇಯ ದಿಕ್ಕಿನಲ್ಲಿ ಆಗಮಶಾಸ್ತ್ರ ರೀತ್ಯಾ ಇರಬೇಕಾದ ಮನ್ಮಥ ವಿಗ್ರಹ, ಅದರ ಪಕ್ಕದಲ್ಲಿ ಭದ್ರ, ಈಶಾನ್ಯ ದಿಕ್ಕಿನಲ್ಲಿ ರತಿ, ಆದರ ಪಕ್ಕದಲ್ಲಿ ಸುಭದ್ರ ಈ ದ್ವಾರಪಾಲಕರುಗಳ ವಿಗ್ರಹ ಗಳು ಇರುತ್ತವೆ.

ದ್ವಾರಪಾಲಕರುಗಳ ವಿಗ್ರಹಗಳ ಮೇಲೆ ಲತೆಯಿಂದ ಕೂಡಿದ ಗೋಡೆ ಇದೆ. ಕಂಭದ ಮೇಲೆ ಉಭಯ ಪಾರ್ಶ್ವಗಳಲ್ಲೂ ಮಕರ ವಾಹನವಿದೆ. ಇದರ ಮಧ್ಯೆ ಗರುಡಾರೂಢನಾದ ಷೋಢಶ ಭುಜ ನರಸಿಂಹನು ಹಿರಣ್ಯ ಕಶಿಪುವಿನ ವಧೆ ಮಾಡುವ ವಿಗ್ರಹವಿದೆ. ನಾರಸಿಂಹನ ಮೇಲೆ ಪ್ರಭಾವಳಿ ಯಲ್ಲಿ ದಶಾವತಾರ, ಅದರ ಮೇಲೆ ಬೇಲು, ಪುನಃ ಅದರ ಮೇಲೆ ಅಷ್ಟ ದೀಕ್ಪಾಲಕರು ವಾಹನ ಸಮೇತ ಇರುವುದನ್ನು ನೋಡಬಹುದು. ಬಾಗಿ ಲೊಂದಿಗೆ ಮಧ್ಯೆ ಲಕ್ಷ್ಮೀನಾರಾಯಣ ಕ್ಷೇತ್ರಪಾಲ ಯಕ್ಷರಿಂದೊಡಗೂಡಿದೆ.

ಪ್ರತಿ ದ್ವಾರಗಳ ಪಕ್ಕದಲ್ಲಿ ಚಿಕ್ಕ ಗುಡಿಗಳು—ಅವುಗಳಿಗೆ ಕೆಳಗಿನ ಪೀಠದಲ್ಲಿಯೂ ಗುಡಿಗಳು ನಿರ್ಮಿಸಲ್ಪಟ್ಟಿವೆ. ಈ ಗುಡಿಗಳಿಂದ ಅಲಂಕೃತ ವಾಗಿರುವ ಪ್ರವೇಶಗಳ ಮೂಲಕ ಮೆಟ್ಟಲುಗಳಲ್ಲಿ ಹತ್ತಿ ದೇವಾಲಯುವನ್ನು ಸುತ್ತುವರಿಯುವ ಅಥವಾ ಪ್ರದಕ್ಷಿಣೆ ಮಾಡುವ ಸ್ಥಳದಲ್ಲಿ ನಿಲ್ಲಬಹುದು. ಪೂರ್ವದ್ವಾರದಲ್ಲಿ ಭೈರವ ಮತ್ತು ದುರ್ಗಾ, ದಕ್ಷಿಣದಲ್ಲಿ ತಾಂಡವೇಶ್ವರ ಮತ್ತು ಬ್ರಾಹ್ಮಿ, ಉತ್ತರದಲ್ಲಿ ವಿಷ್ಣು ಮತ್ತು ಮಹಿಷಾಸುರಮರ್ದಿನಿ ವಿಗ್ರಹ ಗಳನ್ನು ಸ್ಥಾಪಿಸಲಾಗಿದೆ.

ಈ ದೇವಾಲಯದ ಶಿಲ್ಪಕಲಾ ವೈವಿಧ್ಯವನ್ನು ಕ್ರಮವಾಗಿ ನೋಡುವು ದಾದರೆ ಈ ರೀತಿ ಇದೆ. ಪೂರ್ವದ್ವಾರದಿಂದ ಪ್ರದಕ್ಷಿಣೆಯಾಗಿ ಹೊರಟರೆ ಮೊದಲು ಚಿಕ್ಕ ಗುಡಿಯಲ್ಲಿ ಶ್ರೀಧರಮೂರ್ತಿ ವಿಗ್ರಹವಿದೆ. ಅಲ್ಲಿಂದಾ ನೋಡುವಲ್ಲಿ ಆನೆಯ ಸಾಲು ಅದರ ಮೇಲೆ ಮುಂದೆ ಚಾಚಿರುವ ಕಾರ ನೀಸು ಪುನಃ ಮುಂದೆ ಚಾಚಿರುವ ಕಾರನೀಸು ಅಥವಾ ಕೀರ್ತಿ ಮುಖಗಳು ಅಥವಾ ಸಿಂಹ ಮುಖಗಳು ಇವೆ. ಅವುಗಳ ಮೇಲೆ ಕಲ್ಲಿನೊಳಗೇ ಕೊರೆದಿ ರುವ ದುಂಡಾದ ಲತೆಗಳನ್ನು ನೋಡಬಹುದಾಗಿದೆ ಈ ಲತೆಗಳಲ್ಲಿ ದುಂಡಾಗಿ ಕೊರೆದಿರುವ ಭಾಗಗಳೊಳಗೇ ಪ್ರಾಣಿವರ್ಗ ಸಸ್ಯವರ್ಗ ಇವುಗಳನ್ನೂ,

ಯಕ್ಷರುಗಳು. ಜಿನ, ಬುದ್ಧ, ಪಕ್ಷಿಗಳು, ಪ್ರಾಣಿಗಳು, ಬೇಟೆಗಾರರು ಮುಂತಾದವುಗಳು ಕೆತ್ತಲ್ಪಟ್ಟಿವೆ. ಕ್ರಮವಾಗಿ ನೋಡುವುದಕ್ಕೆ ಅನುಕೂಲಿಸುವಂತೆ ವಿವರಿಸುವುದಾದರೆ ಕೆಳಗಿನಿಂದಾ ಮೇಲ್ಭಾಗದ ಜಾಲಂದ್ರದ ಕಿಟಕಿಗಳ ವರೆಗೆ—(ಮೂಲ ದೇವಸ್ಥಾನದ ಹೊರಭಾಗ—

೧) ಆನೆಯ ಸಾಲು— ಸ್ವಾಭಾವಿಕವಾಗಿ ಒಂದರ ಹಿಂದೊಂದು ಹಿಂಬಾಲಿಸುವಂತೆಯೂ ಮಧ್ಯೆ ಸೊಂಡಿಲನ್ನು ತಿರುಗಿಸಿಕೊಂಡು ಇನ್ನೊಂದು ಆನೆಯ ಸೊಂಡಿಲಿಗೆ ಕೊಂಡಿಹಾಕಿಕೊಂಡಿರುವುದು ಕಾಣಬರುತ್ತದೆ.

೨) ಸಿಂಹಗಳ ಸಾಲು.

೩) ಸವಾರರಿಂದೊಡಗೂಡಿರುವ ಕುದುರೆಗಳ ಸಾಲು. ಕೆಲವು ಭಾಗಗಳಲ್ಲಿ ಉತ್ತರದಲ್ಲಿ ಹೀಗಿರುತ್ತದೆ. ದಕ್ಷಿಣಭಾಗದ ಹೊರಗಿನ ಗೋಡೆಯು ಈ ರೀತಿಯದಾಗಿದೆ.

೧) ಆನೆಯ ಸಾಲು

೨) ಮೇಲೆ ತೋರಣವನ್ನು ಹೋಲುವ ಮತ್ತು ಸಿಂಹಲಲಾಟಗಳಿಂದ ಕೂಡಿರುವ ಕಾರನೀಸು (Cornice)

೩) ಕಲ್ಲಿನ ಸುರಳಿಗಳೊಳಗೆ ಚಿತ್ರಗಳನ್ನು ಕೊರೆದಿರುವ ನೋಟ.

೪) ಇವುಗಳ ಮೇಲೆ ಪ್ರಭಾವಳಿಯೊಳಗೆ ಕೆತ್ತಿರುವ ಸಣ್ಣ ಸಣ್ಣ ಹೆಣ್ಣು ವಿಗ್ರಹಗಳು. ಮಧ್ಯೆ ಸ್ವಲ್ಪ ಹಿಂಭಾಗದಲ್ಲಿ ಯಕ್ಷರುಗಳು ಕೂತಿರುವ ರೀತಿಯಲ್ಲಿ ಕೊರೆದಿರುವುದು.

೫) ಮೇಲ್ಭಾಗದಲ್ಲಿ ಸಣ್ಣ ಕಂಭಗಳ ಮಧ್ಯದಲ್ಲಿ ಸೂಕ್ಷ್ಮವಾಗಿ ಕೊರೆದಿರುವ ಹೆಣ್ಣು ವಿಗ್ರಹಗಳು.

೬) ಇವುಗಳ ಮೇಲೆ ಸೂರಿನಂತೆ ಮೇಲಿನ ಕಲ್ಲು ಚಾಚಿದೆ. ಕೆಳಭಾಗ ತೋರಣದಂತೆ ಅಲಂಕೃತವಾಗಿದೆ. ಮೇಲ್ಭಾಗದಲ್ಲಿ ಸಣ್ಣ ಸಣ್ಣ ಗೋಪುರಗಳು ಅವುಗಳ ನಡುವೆ ಸಿಂಹಗಳೂ ಮತ್ತು ಇತರ ಚಿಕ್ಕ ವಿಗ್ರಹಗಳೂ ಕೊರೆಯಲ್ಪಟ್ಟಿವೆ,

೭. ಇವೆಲ್ಲವುಗಳ ಮೇಲ್ಭಾಗದಲ್ಲಿ ಮಧ್ಯೆ ಮಧ್ಯೆ ಎರಡು ಸಣ್ಣ ಕಂಭಗಳ ಮತ್ತು ಪಕ್ಕದಲ್ಲಿ ರಾಮಾಯಣ ಮಹಾಭಾರತದ ಕಾಲದ ವೀರಾಗ್ರಣಿಗಳು ಪುರಾಣ ಪುರುಷೋತ್ತಮರು ಇವರುಗಳನ್ನು ಸಮಂಜಸವಾಗಿ ಹೋಲುವ ವಿಗ್ರಹಗಳು ಕೆತ್ತಲ್ಪಟ್ಟಿವೆ.

ಈ ರೀತಿಯ ಚಿತ್ರಯುಕ್ತವಾದ ಶಿಲ್ಪದ ಕಟ್ಟಡದ ಮೇಲ್ಭಾಗವು ಜಾಲಂಧ್ರದ ಗೋಡೆಯಿಂದ ಆವೃತವಾಗಿದೆ. ಕೆಲವುಕಡೆ ರಂಧ್ರಯುತವಾದ ಗೋಡೆ ಇರವುದನ್ನು ಕಾಣಬಹುದು ಅಲ್ಲಲ್ಲಿ ಕೆಲವು ದೃಶ್ಯಗಳನ್ನು ಅವಕಾಶ ವಿದ್ದಷ್ಟು ಜಾಗದೊಳಗೇ ಅಳವಡಿಸಿಕೊಂಡು ಕೆತ್ತಲಾಗಿದೆ. ಇವೆಲ್ಲವುಗಳ ಮೇಲೆ ಸ್ವಲ್ಪ ಓರೆಯಾಗಿ ಅಲ್ಲಲ್ಲಿ ಒಂದೊಂದು ರಸ ಭಾವಗಳನ್ನು ಪ್ರದರ್ಶಿಸತಕ್ಕ ಮದನಕೈ ವಿಗ್ರಹಗಳಿಂದ ಅಲಂಕೃತವಾಗಿದೆ. ಇವುಗಳು ಅತ್ಯಂತ ಮನೋಹರವಾಗಿವೆ. ಕಲ್ಲಿನಲ್ಲಿ ಶಿಲ್ಪಿಯು ಸಾಧಿಸಿರುವ ಕಲಾ ಕೌಶಲ್ಯದ ಪರಮೋನ್ನತಿಯ ಪ್ರತೀಕಗಳಾಗಿವೆ ಇವುಗಳ ವಿವರ ಪ್ರತ್ಯೇಕವಾಗಿ ಕೊಡಲಾಗಿದೆ.

ನವರಂಗದ ಹೊರಭಾಗದಲ್ಲಿ ಒಟ್ಟು ೨೦ ಜಾಲಂಧ್ರದ ಕಿಟಕಿಗಳಿವೆ. ಇವುಗಳಲ್ಲಿ ೧೦ ಬಲ ಭಾಗದಲ್ಲಿಯೂ, ೧೦ ಎಡ ಭಾಗದಲ್ಲಿಯೂ ಇವೆ. ಆದರೆ ಎಲ್ಲವೂ ಶಿಲ್ಪ ಕಲಾಚಾತುರ್ಯದಿಂದ ಕೂಡಿರದೆ ಕೇವಲ ಎಡ ಬಲಗಳಲ್ಲಿ ಐದರಂತೆ ಪೌರಾಣಿಕ ದೃಶ್ಯಗಳಿಂದ ಕೂಡಿವೆ. ಅವುಗಳಲ್ಲಿ ಕೆಲವು ದೃಶ್ಯಗಳ ವಿವರ ಸಂಕ್ಷೇಪವಾಗಿ ಕೊಡಲಾಗಿದೆ.

## ವಿಷ್ಣುವರ್ಧನನ ದರ್ಬಾರು

ಮೂಲ ದೇವಸ್ಥಾನದ ಪೂರ್ವದಿಕ್ಕಿನ ಬಲಭಾಗದ ಕಲ್ಲುಕಟ್ಟೆ (Screen) ಅಥವಾ ಮರೆಯಲ್ಲಿ ಸಿಂಹಪೀಠದಿಂದ ಕೂಡಿರುವ ವಿಷ್ಣುವರ್ಧನ ಮಹಾರಾಜನ ಆಸ್ಥಾನ ಅಥವಾ ದರ್ಬಾರು. ಇದರಲ್ಲಿ ಖಡ್ಗ ಮತ್ತು ವಿಳ್ಯಧಾರಿಯಾಗಿ ಕರ್ಣ ಕುಂಡಲದೊಡನೆ ಕಿರೀಟವಿಲ್ಲದ ಚಾಲುಕ್ಯ ಸಾಮಂತನಂತಿರುವ ವಿಗ್ರಹ, ಇದರ ಎಡಗಡೆ ತಾಂಬೂಲ ಹಿಡಿದಿರುವ ಶಾಂತಳಾದೇವಿ—ಅಮಾತ್ಯ ಗುರು, ಸೇವಕ, ಸೇವಕಿಯರಿಂದೊಡಗೂಡಿದ ದರ್ಬಾರು—ಗುರುಗಳು ಹೇಳುತ್ತಿರುವದನ್ನು ಧೊರೆಯು ಆಲಿಸುವಂತಿದೆ. ಧೊರೆಯ ಬಲ ಬಾಗದಲ್ಲಿ ಸ್ವಲ್ಪ ಮುಂಭಾಗದಲ್ಲಿ ಆಸನಾರೂಢರಾಗಿರುವ ಇಬ್ಬರು ಗುರುಗಳು ಆ ಪೈಕಿ ಒಬ್ಬರು ಉಪದೇಶಿಸುವಂತಿರುವ ಭಾವವನ್ನು ಪ್ರದರ್ಶಿಸುತ್ತಿರುವುದು—ಹಿಂಭಾಗದಲ್ಲಿ ಇಬ್ಬರು ಸೇವಕರು ಇರುವುದು. ಇವುಗಳೆಲ್ಲಾ ಆಗಿನ ಆಸ್ಥಾನದ ಸಹಜವಾದ ದೃಶ್ಯವಾಗಿವೆ. ಮೇಲ್ಭಾಗದಲ್ಲಿ ಕೇಶವ ದೇವರ ವಿಗ್ರಹವು ಹನುಮಂತ—ಗರುಡನ ಸಮೇತವಾಗಿದೆ.

## ಬಲಿ –ವಾಮನ

ಅಲ್ಲಿಂದ ಮುಂದೆ ಮೂರನೆಯ ಕಲ್ಲು ಪರದೆಯ ಹೊರಭಾಗದಲ್ಲಿ ದೈತ್ಯ ರಾಜನಾದ ಬಲಿ ಚಕ್ರವರ್ತಿಯು, ವಾಮನವತಾರ ತಾಳಿರುವ ವಿಷ್ಣು ವಿಗೆ ದಾನಮಾಡುತ್ತಿರುವ ದೃಶ್ಯವನ್ನು ಪ್ರದರ್ಶಿಸತ್ತದೆ. ಮೇಲ್ಭಾಗದಲ್ಲಿ ಹನುಮಂತ ಮತ್ತು ಗರುಡನ ಮಧ್ಯದಲ್ಲಿರುವ ಶ್ರೀಲಕ್ಷ್ಮೀ ನಾರಾಯಣನ ವಿಗ್ರಹವಿದೆ. ಅದೇ ಆಯಕಟ್ಟಿನ ಮಧ್ಯಭಾಗದಲ್ಲಿ ಬ್ರಹ್ಮನಿಂದ ಪ್ರಕ್ಷಾ ಳನವಾಗಿ ಎತ್ತಿದ ಪಾದವುಳ್ಳ ತ್ರಿವಿಕ್ರಮನ ದೃಶ್ಯವಿದೆ. ಬಲ ಭಾಗದಲ್ಲಿ ಕೈಮುಗಿದು ನಿಂತಿರುವ ಬಲಿಯ ವಿಗ್ರಹವಿದೆ. ಎಡಭಾಗದಲ್ಲಿ ಕೈಮುಗಿದು ನಿಂತಿರುವ ಗರುಡನ ವಿಗ್ರಹವೊಂದು, ಮತ್ತೊಂದು ದೈತ್ಯರ ಗುರುವೂ ಮಂತ್ರಿಯೂ ಆದ ಶುಕ್ರಾಚಾರ್ಯರನ್ನು ಎಳೆಯುತ್ತಿರುವುದನ್ನು ನೋಡ ಬಹುದು. ಇವುಗಳ ಕೆಳಭಾಗದಲ್ಲಿ ದಾನ ಮಾಡುತ್ತಿರುವ ಬಲಿಯ ದರ್ಬಾ ರನ್ನು ಕೆತ್ತಲಾಗಿದೆ.

ಮುಂದೆ ನೋಡುವಲ್ಲಿ ಮೇಲ್ಭಾಗದಲ್ಲಿ ಶ್ರೀಲಕ್ಷ್ಮೀನಾರಾಯಣನ ವಿಗ್ರಹವೂ ಮಧ್ಯಭಾಗದಲ್ಲಿ ಶ್ರೀಕೃಷ್ಣನು ಕಾಳಿಯಮರ್ದನನಾಗಿ (ಕಾಳಿಯ ಪಕ್ಕದಲ್ಲಿ ಎರಡು ವಿಗ್ರಹಗಳು ಕೈಮುಗಿದು ನಿಂತಿರುತ್ತವೆ) ರುವಂತೆ ಕೆತ್ತಿರ ಲಾಗಿದೆ.

೯ನೇಯ ದೃಶ್ಯ— ಮುಂದುವರಿದಲ್ಲಿ ಮೇಲ್ಭಾಗದಲ್ಲಿ ವಿಷ್ಣುವು ಹನು ಮಂತ ಗರುಡ ಇವರಿಂದೊಡಗೂಡಿರವುದು— ಮಧ್ಯಭಾಗದಲ್ಲಿ ಕೈಲಾಸಾಧಿ ಪತಿಯಾದ ಈಶ್ವರನು ನಂದಿಯ ಮೇಲೆ ಆಸನಾರೂಢನಾಗಿರವುದು-ಗಣ ಪತಿ–ಸುಬ್ರಹ್ಮಣ್ಯ ಇವರೂ–ಸೈನಿಕರು ಧ್ವಜ--ಕತ್ತಿ ಗುರಾಣಿಗಳನ್ನು ಹಿಡಿ ದಿರುವುದನ್ನು ಚಿತ್ರಿಸಿ ಕೊರೆಯಲಾಗಿದೆ.

## ನಾರಸಿಂಹ

೧೦ನೆಯ ದೃಶ್ಯದಲ್ಲಿ ಮೇಲ್ಭಾಗದಲ್ಲಿ ಲಕ್ಷ್ಮೀನಾರಾಯಣ ಹನುಮಂತ ಈ ವಿಗ್ರಹಗಳಿಂದಲೂ ಮಧ್ಯಭಾಗದಲ್ಲಿ ಪಕ್ಕಗಳಲ್ಲಿ ಹನುಮಂತ ಗರುಡನ ವಿಗ್ರಹಗಳು ಮಧ್ಯದಲ್ಲಿ ಹಿರಣ್ಯಕಶಿಪುವನ್ನು ಸಂಹಾರ ಮಾಡುತ್ತಿರುವ

(ಕರುಳನ್ನು ಕಿತ್ತು ಬಗೆಯುತ್ತಿರುವಂತೆಯೇ) ದೃಶ್ಯವನ್ನು ಕೊರೆಯಲಾಗಿದೆ. ಕೆಳಭಾಗದ ಜಾಲಂಧ್ರದ ಕಿಟಕಿಯಲ್ಲಿ ಜಾಗವಿರುವಷ್ಟು ಭಾಗಗಳಲ್ಲಿ ಪ್ರಹ್ಲಾದನು ಕೈಮುಗಿದುಕೊಂಡು ನಾನಾರೀತಿಯ ಚಿತ್ರ ಹಿಂಸೆಗಳನ್ನು ಅನುಭವಿಸುತ್ತಿರುವಂತೆಯೇ ಕೆತ್ತಲಾಗಿದೆ.

ಇದೇ ರೀತಿಯಾಗಿ ಪೂರ್ವದ್ವಾರದ ಎಡಭಾಗದಲ್ಲಿಯೂ ಕೂಡ ಕೆಲವು ಆಕರ್ಷಕವಾದ ನೋಟಗಳಿವೆ. ಮೊಟ್ಟ ಮೊದಲು ಮೇಲ್ಭಾಗದಲ್ಲಿ ಯೋಗಾನರಸಿಂಹ ದೇವರ ವಿಗ್ರಹ—ಸ್ವಲ್ಪ ದೂರದಲ್ಲಿ ಹನುಮಂತ ಮತ್ತು ಗರುಡನ ವಿಗ್ರಹಗಳಿವೆ. ಮಧ್ಯಭಾಗದಲ್ಲಿ ವಿಷ್ಣುವರ್ಧನನ ಮಗನಾದ ೧ನೆಯ ನರಸಿಂಹನ ದರ್ಬಾರು, ಎಡಭಾಗದಲ್ಲಿ ರಾಣಿಯು ಕೂತಿರುವುದು—ದೊರೆಯ ಬಲಗೈಯಲ್ಲಿ ಖಡ್ಗವಿದೆ. ಎಡಗೈಯಲ್ಲಿ ಪುಷ್ಪವಿದೆ. ಇವುಗಳಲ್ಲದೆ ಇತರೆ ಅಧಿಕಾರ ವರ್ಗದವರನ್ನೂ ಕಾಣಬಹುದು.

ನಾಲ್ಕನೆಯ ಜಾಲಂಧ್ರದ ಕಿಟಕಿಯಲ್ಲಿ ವಿಷ್ಣುವು ಆಸನಾರೂಢನಾಗಿರುವುದು—ಎರಡನೆಯದರಲ್ಲಿ ಕ್ಷೀರಸಾಗರ ಮಥನವನ್ನು ಸೂಚಿಸುವ ದೃಶ್ಯ ಕಾಣಬಹುದು.

ಮುಂದುವರಿದು ವೀಕ್ಷಿಸಿದಲ್ಲಿ ಹನುಮಂತ ಮತ್ತು ಗರುಡಪಾರ್ಶ್ವದಲ್ಲಿ ಮಧ್ಯೆ ವಿಷ್ಣುವಿನ ವಿಗ್ರಹ—ಕೆಳಭಾಗದಲ್ಲಿ ಕಂಸವಧೆ ಈ ರೀತಿಯಲ್ಲಿ ಚಿತ್ರಿಸಲಾಗಿದೆ.

ಇನ್ನೊಂದರಲ್ಲಿ (೯ನೆಯ ಜಾಲಂಧ್ರ) ಆದಿಶೇಷನನ್ನೊರಗಿ ನಿಂತಿರುವ ರಂಗನಾಥನನ್ನು ಚಿತ್ರಿಸಲಾಗಿದೆ.

೧೦ನೆಯ ಜಾಲಂಧ್ರದಲ್ಲಿ ಲಕ್ಷ್ಮೀ ನಾರಾಯಣನ ವಿಗ್ರಹವೂ ಎರಡನೆಯದರಲ್ಲಿ ಹನುಮಂತ ಮತ್ತು ಗರುಡ ಇವರು ಒಂದು ನೇರಳೆ ಹಣ್ಣಿಗಾಗಿ ಹೊಡೆದಾಡುತ್ತಿರುವುದು ಈ ಮಧ್ಯೆ ವಿಷ್ಣು ಚಕ್ರವೊಂದು ಎರಡು ಭಾಗಮಾಡಿರುವುದನ್ನು ಕಾಣಬಹುದು. ಇಲ್ಲಿ ಇವರು ಶಿರೋ ಭೂಷಣಗಳನ್ನು ಬದಲಾಯಿಸಿಕೊಂಡು ಕೂತಿರುವುದು ಒಂದು ವಿಶೇಷವೆನಿಸಿದೆ.

# ದೇವಾಲಯದಲ್ಲಿ ಕಲಾಕೌಶಲ್ಯ

ಮೇಲೆ ವಿವರಿಸಲಾಗಿರುವ ದೃಶ್ಯಗಳಲ್ಲಿ ವರ್ಣಿಸಿರುವ ವಿಗ್ರಹಗಳಿಗಷ್ಟೇ ಅಲ್ಲದೆ ದೇವಸ್ಥಾನದ ಒಳಗೂ ಹೊರಗೂ ಶಿಲ್ಪವಿದ್ಯೆಯು, ಕಲಾಕೌಶಲ್ಯದ ಔನ್ನತ್ಯವು ಕಾಣಬರುತ್ತದೆ. ಅಸಂಖ್ಯಾತ ಸುಂದರ ವಿಗ್ರಹಗಳು ಕೆತ್ತಲ್ಪಟ್ಟಿವೆ ಯಾದರೂ ಇವುಗಳಲ್ಲಿ ಪೂಜಾಮೂರ್ತಿಗಳು ಅಥವಾ ಆರಾಧ್ಯ ಮೂರ್ತಿಗಳು ಶಿಲ್ಪಶಾಸ್ತ್ರರೀತ್ಯಾ (Iconography) ಇವೆ. ಬ್ರಹ್ಮ, ವಿಷ್ಣು, ಮಹೇಶ್ವರರು, ಲಕ್ಷ್ಮೀ, ಸರಸ್ವತಿ, ಕಾಳಿಕಾದೇವಿ, ಭೈರವ, ನಟರಾಜ, ಗಣಪತಿ, ಸೂರ್ಯ, ದಶಾವತಾರ ವಿಗ್ರಹಗಳು ಸುಲಕ್ಷಣವಾಗಿವೆ. ಸಾಮಾನ್ಯ ವಿಗ್ರಹಗಳು ಕೂಡ ಬಹು ಸುಂದರವಾಗಿ ಕೆತ್ತಲ್ಪಟ್ಟಿವೆ. ಅಲಂಕಾರಯುಕ್ತವಾದ ಅನೇಕ ಸಣ್ಣ ಗುಡಿಗಳಲ್ಲಿ ವಿಷ್ಣುವಿನ ಅವತಾರ ಅಥವಾ ಸ್ವರೂಪದ ವಿಗ್ರಹಗಳನ್ನು ಶಿವ ಮತ್ತು ದೇವತೆಗಳ ವಿಗ್ರಹಗಳನ್ನು ಕೆತ್ತಲಾಗಿದೆ. ಅವುಗಳಲ್ಲಿ ಮುಖ್ಯ ವಾದವುಗಳು ಯಾವುವೆಂದರೆ

(೧) ಹರಿಹರ:— ಬಲಭಾಗದಲ್ಲಿ ನಂದಿಯೂ ಎಡಭಾಗದಲ್ಲಿ ಗರುಡನೂ ಇರುವಂತೆ ಕೆತ್ತಲಾಗಿದೆ.

(೨) ಶಿವ:— ಜಲಂಧರನೆಂಬ ದೈತ್ಯನನ್ನು ತ್ರಿಶೂಲದಿಂದ ಎತ್ತುತ್ತಿರುವುದು.

(೩) ಕಾಳಿಯ ನರ್ತನ.

(೪) ಗಂಡುಗೊಡಲಿ ಸಮೇತವಿರುವ ಪರಶುರಾಮರು.

(೫) ವಾಮನ:— ಪ್ರಪಂಚೋದ್ಧಾರಕ್ಕಾಗಿ ಅಂದರೆ ದೈತ್ಯರ ಆಡಳಿತ ನಿರ್ಮೂಲಗೊಳಿಸಲು ವಿಷ್ಣುವು ವಾಮನಾವತಾರ ತಾಳಿ ಅತಿ ದಾನವಂತನಾದ ಬಲಿಚಕ್ರವರ್ತಿಯಿಂದ ಭೂದಾನವನ್ನು ಕೇಳಿ ಅವನನ್ನೂ ಅವನ ಅನುಯಾಯಿಗಳನ್ನೂ ಪಾತಾಳಕ್ಕೆ ತುಳಿದನು.

(೬) ಕೈಲಾಸವನ್ನು ರಾವಣನು ಎತ್ತುತ್ತಿರುವ ದೃಶ್ಯ.

ಲಂಕಾಧಿಪತಿಯಾದ ರಾವಣನು ಈಶ್ವರನ ವರವನ್ನು ಕೇಳಿಕೊಳ್ಳುವ ಉದ್ದಿಶ್ಯದಿಂದ ಕೈಲಾಸಪರ್ವತವನ್ನು ಎತ್ತುತ್ತಿರುವಂತೆ ಕಲ್ಲಿನಲ್ಲಿ ಚಿತ್ರಿಸಿ ಕೊರೆಯಲಾಗಿದೆ. ಈ ಚಿತ್ರದಂತೆ ಪರ್ವತದ ಮೇಲ್ಭಾಗದಲ್ಲಿ ಶಿವ ಮತ್ತು

ಪಾರ್ವತಿ ಸಂಭಾಷಣೆ ನಡೆಸುತ್ತಿದ್ದಾರೆ. ಸಾಗರ ಮೇಲ್ಭಾಗದಲ್ಲಿ ದಟ್ಟ ವಾದ ಕಾಡು, ವಿವಿಧಜಾತಿಯ ಮರಗಳು, ಪ್ರಾಣಿಗಳು, ಹಾವುಗಳು, ಕಪಿ ಗಳು, ಜಿಂಕೆಗಳು, ಸಿಂಹಗಳು, ಆನೆಗಳು ಚಿತ್ರಿಸಲ್ಪಟ್ಟಿವೆ. ಇನ್ನೂ ಮೇಲ್ಮಟ್ಟ ದಲ್ಲಿ ಸಾಧುಗಳು, ದೇವತೆಗಳು ಮತ್ತು ಶಿವನ ಪರಿವಾರದವರನ್ನು ನೋಡ ಬಹುದು.

(೭) ದಕ್ಷಬ್ರಹ್ಮ:— ಟಗರಿನ ತಲೆ ಕೈಲಿದೆ.

(೮) ಮಹಿಷಾಸುರಮರ್ದಿನಿ:— ಮಹಿಷಾಸುರನನ್ನು ಚಾಮುಂ ಡಿಕಾ ದೇವಿಯು ಸಂಹರಿಸುತ್ತಿರುವುದು—ಕಪ್ಪೆಚೆನ್ನಿಗರಾಯ ದೇವಸ್ಥಾನದ ಒಳಗೆ ಒಂದು ಚಿಕ್ಕ ಗುಡಿಯಲ್ಲಿ ಕಾಣಬಹುದು. ವಿಗ್ರಹ ಬಹು ಸುಂದರ ವಾಗಿದೆ ಇತರ ಕಡೆಗಳಲ್ಲೂ ಇದೆ.

(೯) ವರಾಹ ಮೂರ್ತಿ:— ಮಹಾ ವಿಷ್ಣುವು ವರಾಹರೂಪವನ್ನು ತಾಳಿ ಭೂದೇವಿಯನ್ನು ಪಾತಾಳದಿಂದ ಬಿಡಿಸಿಕೊಂಡು ಬರುತ್ತಿರುವ ದೃಶ್ಯ. ದಶಾವತಾರಗಳಲ್ಲೊಂದಾದ ದೃಶ್ಯ.

(೧೦) ಗದಾಧರ:— ವಿಷ್ಣುವಿನ ಅವತಾರ ಮೂರ್ತಿ. ದಕ್ಷಿಣ ಭಾರತದಲ್ಲಿ ಅಪರೂಪ.

(೧೧) ನಾರಸಿಂಹ:—ಸಿಂಹ ಮುಖಾಕೃತಿ(ಮುಖವಾಡ)ಯುಳ್ಳ ನರಸಿಂಹದೇವರು, ಲೋಕಕಂಟಕನೂ ಮತ್ತೂ ಭಕ್ತ ಪ್ರಲ್ಹಾದನಿಗೆ ಚಿತ್ರ ಹಿಂಸೆ ಕೊಟ್ಟಂಥ ದೈತ್ಯನೂ ಆದ ಹಿರಣ್ಯಕಶಿಪುವಿನ ಕರುಳನ್ನು ನಖಗಳಿಂದ ಕಿತ್ತಿ ಎಳೆದು ಬಗೆಯುತ್ತಿರುವ ದೃಶ್ಯ. ಕರುಳಿನೋಪಾದಿಯಲ್ಲಿಯೇ ಕಲ್ಲಿ ನಲ್ಲಿ ಕೊರೆಯಲಾಗಿರುವುದನ್ನು ಕಾಣಬಹುದು.

(೧೨) ಯಶೋದಾ ಮತ್ತು ಕೃಷ್ಣ.

(೧೩) ಸೂರ್ಯನಾರಾಯಣ:—ಏಳು ಕುದುರೆಗಳಿಂದ ಎಳೆಯಲ್ಪ ಡುವ ರಥವನ್ನೇರಿ ಸಾರಥಿಯಾದ ಅರುಣನಿಂದಾ ಹೊಡೆಯಲ್ಪಟ್ಟ ರಥವು ಮೇಘದೊಳಗಿನಿಂದಾ ಬರುತ್ತಿರುವಂತೆ ಕೆತ್ತಲಾಗಿದೆ.

(೧೪) ಭೀಮನು ಭಗದತ್ತನ ಆನೆಯೊಡನೆ ಹೋರಾಡುತ್ತಿರು ವುದು.

(೧೫) ಬಲರಾಮನು ನೇಗಿಲನ್ನು ಹಿಡಿದಿರುವುದು.

(೧೬) ಚಂದ್ರನು ಕುಮುದಗಳನ್ನು ಎರಡು ಕೈಗಳಲ್ಲೂ ಹಿಡಿದಿರುವುದು (ಇಂದುಃಕುಮುದ ಬಾಂಧವಃ ಎಂಬಂತೆ—)

(೧೭) ದೊರೆಯು ತನ್ನ ಪಟ್ಟಮಹಿಷಿಯೊಡನೆ ದರ್ಬಾರಿನಲ್ಲಿ ಕುಳಿತು ಕುಸ್ತಿಪಂದ್ಯವನ್ನು ವೀಕ್ಷಿಸುತ್ತಿರುವುದು.

(೧೮) ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುತ್ತಿರುವುದು.

(೧೯) ಕೊಳಲು ಗೋಪಾಲಕೃಷ್ಣ. ವೇಣುಗೋಪಾಲನೆಂದರೂ ಕೊಳಲಿನ ಕೃಷ್ಣನೆ.

(೨೦) ಲಕ್ಷ್ಮೀ ನಾರಾಯಣ.

(೨೧) ನಾಟ್ಯಪಾದ ಗಣಪತಿ.

ಇವುಗಳಲ್ಲದೆ ಇನ್ನೂ ಅನೇಕ ವಿಗ್ರಹಗಳು ಕೆತ್ತಲ್ಪಟ್ಟಿವೆ. ಸ್ವರ್ಗದ ಬಾಗಿಲೆಂದು ಕರೆಯಲ್ಪಡುತ್ತಿರುವ ಉತ್ತರಭಾಗದ ಬಾಗಿಲಲ್ಲಿ ಹಂಸಗಳು ಆಮೆಯನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ಚಿತ್ರಿಸಲಾಗಿದೆ. ಈಶಾನ್ಯದ ಒಂದು ಚೌಕಟ್ಟಿನಲ್ಲಿ ಸಂಹಾರದ ಒಂದು ದೃಶ್ಯವಿದೆ. ಒಂದು ಕಾಡು ಹಂದಿಯನ್ನು ಒಂದು ಹೆಬ್ಬಾವು ಅರ್ಧಭಾಗ ನುಂಗಿದಂತಿದೆ. ಅದನ್ನು ಒಂದು ಸಲಗವು ತುಳಿದಿದೆ. ಸಲಗನೊಡನೆ ಸಿಂಹವು ಹೋರಾಟಕ್ಕೆ ನಿಂತಿದೆ. ಸಿಂಹವು ಶರಭದ ಕ್ರೋರೆದವಡೆಗಳಲ್ಲಿ ಸಿಕ್ಕಿದೆ. ಇವೆಲ್ಲವನ್ನೂ ಗಂಡಭೇರುಂಡ ಪಕ್ಷಿಯು ತನ್ನ ಕೊಕ್ಕುಗಳಲ್ಲಿ ಎತ್ತಿ ಹಿಡಿದಿದೆ. ಗಂಡಭೇರುಂಡ ಪಕ್ಷಿಯು ಎಷ್ಟು ಪರಾಕ್ರಮವುಳ್ಳದ್ದೆಂದು ಗೊತ್ತಾಗುತ್ತದೆ. ಮೇಲ್ಕಂಡ ವಿಚಿತ್ರ ವ್ಯಾಪಾರವನ್ನೂ, ಅಂತರಿಕ್ಷದಲ್ಲಿ ಹಾರಾಡುತ್ತಿರುವ ದೃಶ್ಯವನ್ನೂ ದೂರದಿಂದ ಒಬ್ಬ ಪ್ರೇಕ್ಷಕನು ವಿಸ್ಮಯಚಕಿತನಾಗಿ ನೋಡುವಂತೆ ಕೆತ್ತಿದೆ.

ಇನ್ನೊಂದು ಕಲ್ಲಿನ ಪಾರ್ಶ್ವದಲ್ಲಿ ಕ್ಷೀರಸಾಗರ ಶಯನನಾದ ವಿಷ್ಣುವು ಕ್ಷೀರಸಾಗರದಲ್ಲಿ ಏಳುಹೆಡೆಯ ಶೇಷನ ಮೇಲೆ ಒರಗಿರುವುದನ್ನು ಚಿತ್ರಿಸಲಾಗಿದೆ.

ಈ ರೀತಿಯಾಗಿ ವಿವಿಧ ವಿಗ್ರಹಗಳಿಂದ ಅಲಂಕೃತವಾಗಿ ರಾರಾಜಿಸುತ್ತಿರುವ ದೇವಾಲಯದಲ್ಲಿ ಮನುಷ್ಯ ವರ್ಗಕ್ಕೆ ಸೇರಿಸಬಹುದಾದ ವಿಗ್ರಹಗಳಲ್ಲಿ ಆ ಕಾಲದ ಜನರ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ತಿಳಿಯಬಹುದು. ಆ ಕಾಲದಲ್ಲಿ ಲಾಂಗ್ ಕೋಟು, ಪೈಜಾಮ ಮತ್ತು ಕಮ್ಮರ್

ಬಂದ್‌ಗಳ ಉಪಯೋಗ ತಿಳಿದಿದ್ದಂತೆ ಕೆಲವು ವಿಗ್ರಹಗಳ ಕೆತ್ತನೆಯ ಸ್ವರೂಪದಿಂದ ಗೊತ್ತಾಗುತ್ತದೆ. ಕನ್ನಡಿ, ವೀಣೆ, ತಬಲ ಇವುಗಳನ್ನು ಕಲ್ಲಿನಲ್ಲಿ ಸ್ಪಷ್ಟವಾಗಿ ಕೊರೆಯಲಾಗಿರುವುದನ್ನು ಕಾಣಬಹುದು. ವಿಗ್ರಹಗಳಲ್ಲಿ ವೈವಿಧ್ಯವಿದ್ದರೂ ಕೂಡ ಒಂದೇ ಬಗೆಯ ವಿಗ್ರಹಗಳು ಅನೇಕವಾಗಿವೆ.

ಒಂದೆರಡು ಕಡೆ ಕಾಣಬರುವ ದೃಶ್ಯಗಳನ್ನು ವಿಶದವಾಗಿ ತಿಳಿಸಲಾಗಿದೆ.

೧) ಪೂರ್ವದ್ವಾರದ ದಕ್ಷಿಣಕ್ಕಿರುವ ವಿಷ್ಣುವರ್ಧನನ ದರ್ಬಾರಿಗೆ ಸಂಬಂಧಪಟ್ಟ ಚೌಕಟ್ಟಿನಲ್ಲಿ ವಿಷ್ಣುವರ್ಧನನು ದರ್ಬಾರಿನಲ್ಲಿ ಉದ್ದವಾಗಿ ಕೂದಲನ್ನು ಬಿಟ್ಟುಕೊಂಡು ಕೂತಿರುವುದು, ಮೀಸೆಯನ್ನು ತಿರುಗಿಸಿರುವುದು ಮತ್ತು ರಾಜಯೋಗ್ಯವಾದ ಆಭರಣಗಳನ್ನೂ ಉಡುಪುಗಳನ್ನೂ ಧರಿಸಿರುವುದನ್ನು ನೆನಪಿಗೆ ತರುವಂತಹ ಕೆತ್ತನೆಯ ಕೆಲಸ ಶಿಲ್ಪಿಯ ಕುಶಲತೆಯನ್ನು ಪ್ರದರ್ಶಿಸುತ್ತದೆ. ವಿಷ್ಣುವರ್ಧನನ ಎಡಭಾಗಕ್ಕೆ ಕೊರೆದಿರುವ ವಿಗ್ರಹವು ಪ್ರತಿಭಾಶಾಲಿಯಾದ ರಾಣಿಯಾದ ಶಾಂತಲಾದೇವಿಯದಾಗಿರಬೇಕು. ಅವಳ ತಲೆಯಲ್ಲಿ ತುರುಬಿದೆ. ಅವಳು ಅಸಾಧಾರಣ ಉಡುಗೆ ಮತ್ತು ಆಭರಣದೊಂದಿಗೆ ಅಲಂಕೃತವಾದ ಉಡುಪನ್ನು ಮತ್ತು ಕುಚ್ಚಿನ ಪಟ್ಟಿಯನ್ನು ಹಾಕಿಕೊಂಡಿರುತ್ತಾಳೆ. ದೊರೆಯ ಬಲಭಾಗಕ್ಕೆ ಕೆಲವು ಮುಖ್ಯಸ್ಥರು ಕೂತಿದ್ದು ಅವರಲ್ಲಿ ಒಬ್ಬರು ರಾಜದಂಪತಿಗಳಿಗೆ ಏನನ್ನೋ ವರ್ಣಿಸುತ್ತಿರುವುದನ್ನೂ ಅವರು ಅದನ್ನು ಕುತೂಹಲದಿಂದ ಕೇಳುತ್ತಿರುವುದನ್ನೂ ನೋಡಬಹುದು. ಅವರ ಸುತ್ತಮುತ್ತಲೂ ಭೃತ್ಯರು ಇರುವುದನ್ನು ನೋಡಬಹುದು. ಒಟ್ಟಿನಲ್ಲಿ ಈ ದೃಶ್ಯವು ಹಿಂದೂ ರಾಜನು ಬಹಿರಂಗವಾಗಿ ತನ್ನ ರಾಣಿಯೊಡನೆ ದರ್ಬಾರು ನಡೆಸುವ ಚಿತ್ರವನ್ನು ಸ್ಪಷ್ಟವಾಗಿ ತೋರಿಸುತ್ತದೆ.

ಇದೇ ರೀತಿಯಾಗಿ ವಿಷ್ಣುವರ್ಧನನ ಮಗನಾದ ೧ನೆಯ ನರಸಿಂಹನ ದರ್ಬಾರನ್ನು ಅದೇ ಬಾಗಿಲಿನ ಉತ್ತರ ಭಾಗದಲ್ಲಿ ನೋಡಬಹುದು.

## ಮದನ ಕೈ ಬೊಂಬೆಗಳು

ಹೊರಭಾಗದ ಜಾಲಂಧ್ರದ ಕಿಟಕಿಗಳ ಪಾರ್ಶ್ವದಲ್ಲಿರುವ ಕಂಭಗಳ

ಮೇಲೆ ಓರೆಯಾಗಿ ಸ್ಥಾಪಿಸಲ್ಪಟ್ಟಿರುವ ಕರಿಯ ಛಾಯೆಯ ಕಲ್ಲುಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ಅಂಗಸೌಷ್ಟವದಿಂದ ಕೂಡಿರುವ ವಿಗ್ರಹಗಳೇ ಅತ್ಯಂತ ಆಕರ್ಷಕವಾದವುಗಳು. ಇವುಗಳನ್ನು ಮದನ ಕೈ ಅಥವಾ ಮದ ನಿಕಾ ಬೊಂಬೆಗಳೆಂದು ಕರೆಯುತ್ತಾರೆ (Bracket Images). ಮದನನ ಕೈಗೊಂಬೆಗಳೆಂದು ಹೇಳುವಷ್ಟು ಸೌಂದರ್ಯಭಾವವು ಹೊರಪಡುತ್ತದೆ. ಇವುಗಳನ್ನು ಮುಟ್ಟಲು ಯಾರಿಗೂ ಸಿಗುವಂತಿಲ್ಲ. ಆ ಕಾರಣದಿಂದಾಗಿ ಇವುಗಳ ಸ್ವರೂಪಕ್ಕೆ ಚ್ಯುತಿ ಬಂದಿಲ್ಲ. ದೇವಸ್ಥಾನದ ಹೊರಭಾಗದಲ್ಲಿ ೩೮ ವಿಗ್ರಹಗಳಿವೆ. ಒಳಭಾಗದಲ್ಲಿ ನವರಂಗ ಮಂಟಪದ ಮೇಲ್ಭಾಗದಲ್ಲಿ ರುವ ಕಮಲದ ಮೊಗ್ಗಿನಂತಿರುವ ಭುವನೇಶ್ವರಿಯ ನಾಲ್ಕು ದಿಕ್ಕುಗಳಲ್ಲೂ ಕೂಡ ಈ ಪ್ರತಿಮೆಗಳು ಕಂಭದ ಮೇಲೆ ಓರೆಯಾಗಿ ಸ್ಥಾಪಿತವಾಗಿವೆ. ಅತ್ಯಂತ ಸೂಕ್ಷ್ಮವಾಗಿ ಎರಕಹೊಯ್ದು ತೆಗೆದಂತಿರುವ ಈ ಬೊಂಬೆಗಳನ್ನು ಯಾವುದೋ ಜಾಣತನದಿಂದ ಬಾಗಿ ನಿಲ್ಲಿಸಿರುವಂತೆ ಭಾಸವಾಗುತ್ತದೆ. ಇವುಗಳಲ್ಲಿ ಪ್ರತಿಯೊಂದು ವಿಗ್ರಹದಲ್ಲೂ ಜೀವನಕ್ಕೆ ನಿಕಟಸಂಬಂಧವಿರು ವಂತೆ ವರ್ತಿಸುವುದು ಗೋಚರವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಸ್ತ್ರೀಗೆ ಸಹಜವಾಗಿರುವ ಮೈಕಟ್ಟು, ನಾಚಿಕೆ, ವೈಯ್ಯಾರಗಳನ್ನೂ–ಬೆಡಗು— ಬಿನ್ನಾಣಗಳನ್ನೂ ಕಾಣಬಹುದು. ಒಟ್ಟಾರೆ ನೋಡುವಲ್ಲಿ ವಿಗ್ರಹಗಳು ವಿಲಕ್ಷಣವಾಗಿವೆ. ಶರೀರದ ಪ್ರತಿಯೊಂದು ಭಾಗವೂ ಸಹಜ ಸೌಂದರ್ಯಕ್ಕೆ ಮೆರಗುಕೊಡುವಂತೆ ಕೆತ್ತಲ್ಪಟ್ಟಿದೆ ಇಂಥಾ ಶಿಲ್ಪಕಲೆಯನ್ನು ಚೆನ್ನಾಗಿ ವೀಕ್ಷಿಸಿದವರು ಇವುಗಳಿಗೆ ಬೇರಾವ ರೀತಿಯ ಬದಲಾವಣೆಯನ್ನೂ ಸಮಂಜ ಸವಾಗಿ ಒಪ್ಪುವಂತೆ ಸೂಚಿಸಲಾರರು. ಕರ್ನಾಟಕದ ಹೆಸರಾಂತ ಹಿರಿಯ ಸಾಹಿತಿಗಳಾದ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಈ ವಿಗ್ರಹಗಳನ್ನು ಕುರಿತು "ಅಂತಃಪುರದ ಗೀತೆ"ಯನ್ನು ರಚಿಸಿರುತ್ತಾರೆ. ಇಡೀ ಭಾರತದಲ್ಲಿ ಮಿಗಿಲಾಗಿ ಪ್ರಪಂಚದಲ್ಲಿ ಮತ್ತೆಲ್ಲಿಯೂ ಕಲ್ಲಿನಿಂದಾ ಇಷ್ಟು ಸುಂದರವಾದ ವಿಗ್ರಹಗಳನ್ನು ಕೊರೆದಿರುವುದಿಲ್ಲ. ಕಲ್ಲಿನಿಂದಲೇ ಕೈಬಳೆ, ಆಭರಣ (ತಿಲಕ), ಕನ್ನಡಿ, ಸೀರೆ, ಮೃಗ, ಮುಳ್ಳು, ಚೇಳು, ಕಪಿ ಇವುಗಳನ್ನು ಕೊರೆದಿರುವುದು ಸಹಜ ಸೌಂದರ್ಯವನ್ನು ಹೊರಪಡಿಸುತ್ತದೆ. ಶ್ರೀಮಾನ್ ಡಿ. ವಿ. ಗುಂಡಪ್ಪನವರು ಮದನ ಕೈ ಬೊಂಬೆಗಳ ವಿಚಾರದಲ್ಲಿ ಈ ರೀತಿ

ಅಭಿಪ್ರಾಯಗಳನ್ನು ಕ್ರೋಢೀಕರಿಸಿರುತ್ತಾರೆ.

"ಅಲ್ಲಿಂದಾ ಮೇಲಕ್ಕೆ ಕಣ್ಣೆತ್ತಿ ನೋಡಿದರೆ ಕಾಣುವುದು ಭಾವಾನಂದ ಲೋಕ. ಅದು ಗಾಂಧರ್ವ ಲೋಕ. ಅಪ್ಸರೆಯರಂಥ ಮದನಿಕೆಯರು ಅಲ್ಲಿ ಹಾವಭಾವ ವಿಲಾಸಗಳನ್ನು ತೋರುತ್ತಿದ್ದಾರೆ. ಒಬ್ಬಾಕೆ ಕನ್ನಡಿ ನೋಡಿಕೊಂಡು ತನ್ನ ಮೈ ಬೆಡಗಿಗೆ ತಾನೇ ಮನಸೋತಿದ್ದಾಳೆ. ಇನ್ನೊಬ್ಬಳು ಸುಗಂಧ ತೈಲಗಳಿಂದ ತಲೆಯನ್ನು ಸಿಂಗರಿಸಿಕೊಳ್ಳುತ್ತಿದ್ದಾಳೆ. ಮತ್ತೊಬ್ಬಳು ಆಭರಣ ಧರಿಸಿಕೊಳ್ಳುವ ಸಂಭ್ರಮದಲ್ಲಿದ್ದಾಳೆ. ಒಬ್ಬಳು ಓಕುಳಿಯಾಟದಲ್ಲಿದ್ದಾಳೆ ಕೆಲವರು ಗಾನಪರವಶರಾಗಿದ್ದಾರೆ. ಕೆಲವರು ನರ್ತನೋನ್ಮತ್ತರಾಗಿದ್ದಾರೆ. ಒಬ್ಬಳು ಸೀರೆಯಲ್ಲಿ ಚೇಳುಕಾಣಿಸಿದ ನೆವದಿಂದ, ಒಬ್ಬಳು ಕೋತಿಯ ಕಾಟದ ನೆವದಿಂದ ಭಯ-ಕೋಪಗಳ ಆವೇಶವನ್ನು ತಾಳಿ ಮೈ ಸೊಬಗನ್ನು ವಿಕಾಸಗೊಳಿಸುತ್ತಿದ್ದಾಳೆ. ಎಲ್ಲರೂ ಪರಮಸುಂದರಿಯರು ಮತ್ತು ತಮ್ಮ ತಮ್ಮ ಸೌಂದರ್ಯದ ತಾರತಮ್ಯವನ್ನು ತಿಳಿದುಕೊಂಡವರು."

ಮೇಲ್ಕಂಡ ವರ್ಣನೆ ಸಹಜವೂ ಸ್ಪಷ್ಟವೂ ಆಗಿದೆ. ಕೆಲವರು ದೇವಸ್ಥಾನವನ್ನು ಚಂದ್ರಮಂಡಲಕ್ಕೂ ಮದನ ಕೈಬೊಂಬೆಗಳನ್ನು ನಕ್ಷತ್ರಗಳಿಗೂ ಹೋಲಿಸಿರುತ್ತಾರೆ.

ಮದನಕೈ ಬೊಂಬೆಗಳ ವಿಚಾರವಾಗಿ ಎಷ್ಟೇ ಬರೆದರೂ ಕಲ್ಲಿನಲ್ಲಿ ಶಿಲ್ಪಿಯು ತೋರಿಸಿರುವ ಕಲಾಕೌಶಲ್ಯದ ಹಿರಿಮೆಗೆ ಸರಿತೂಗಲಾರದು. ಸುಂದರವಾದ ಶೈಲಿಯಲ್ಲಿ ನುರಿತವರು ವರ್ಣಿಸುವುದು ಕಷ್ಟವಲ್ಲ. ಆದರೆ ಕಬ್ಬಿಣದ ಅಥವಾ ಎರಕದ ಬೊಂಬೆಗಳಂತೆ ಕಲ್ಲಿನಲ್ಲಿ ಅನುಪಮವಾದ ಹಾವಭಾವ ವಿಲಾಸಗಳನ್ನು ತೋರ್ಪಡಿಸುವಂತೆ ಕೊರೆದಿರುವುದು ಒಂದು ಅಪೂರ್ವ ಕಲೆ.

ಮೂಲ ದೇವರ ವಿಗ್ರಹ ಮತ್ತು ಕಪ್ಪೆಚೆನ್ನಿಗರಾಯಸ್ವಾಮಿ ವಿಗ್ರಹಗಳನ್ನು ಬಿಟ್ಟರೆ ಇವುಗಳು ದೇವಸ್ಥಾನದ ಶಿಲ್ಪವಿದ್ಯೆಯ ಕೆಲಸದಲ್ಲೆಲ್ಲಾ ಅತ್ಯುತ್ತಮವಾದವುಗಳು. ಇವುಗಳು ಬಹುವಾಗಿ ಶೃಂಗಾರದಲ್ಲಿ ಆಸಕ್ತರಾಗಿರುವ, ನೃತ್ಯ-ಗಾನ ಇವುಗಳಲ್ಲಿ ಅಭಿರುಚಿಯುಳ್ಳ ಯುವತಿಯರು ಸೌಂದರ್ಯವನ್ನು ತೋರ್ಪಡಿಸುವ ವಿಗ್ರಹಗಳಾಗಿವೆ; ಶಿಲ್ಪಿಯು ಈ ವಿಗ್ರಹಗಳನ್ನು ವಿಶೇಷ ಕುಶಲತೆಯಿಂದ ಕೊರೆದು ಸೌಂದರ್ಯವೂ ಮತ್ತು ಗಾಂಭೀ



Thribhangi Dance (ತ್ರಿಭಂಗಿ ನೃತ್ಯ)
ಪೀಠ, ಪ್ರಭಾವಳಿಯಂತಿರುವ ಮೇಲ್ಭಾಗ ಇವುಗಳೆಲ್ಲಾ
ಕಲ್ಲಿನಿಂದಲೇ ಕೊರೆದಿರುವುದು.



The Lady and the Scorpion
ಚೇಳನ್ನು ಕಂಡು ಭಯದಿಂದ ಸೀರೆಯನ್ನು ದೂರ ಹಿಡಿದಿರುವ
ಸ್ತ್ರೀವಿಗ್ರಹ—ಚೇಳು ಪೀಠದಲ್ಲಿದೆ

ರ್ಯವೂ ಹಾಸು-ಹೊಕ್ಕಾಗಿ ಕಾಣುವಂತೆ ಮಾಡಿರುತ್ತಾನೆ. ವಿಗ್ರಹಗಳ ಮುಖಭಂಗಿ, ಶರೀರದ ಅವಸ್ಥೆ ಮತ್ತು ಕೈಗಳು ಅರ್ಥವನ್ನು ಸೂಚಿಸುವಂತಿವೆ. ಅನೇಕ ಸಂದರ್ಭಗಳಲ್ಲಿ ಮೋಹಿನಿಯು ಶೃಂಗರಿಸಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಪೂರ್ವದ್ವಾರದ ದಕ್ಷಿಣಕ್ಕಿರುವ ಮೊದಲನೆಯ ವಿಗ್ರಹವು ಮೋಹಿನಿಯದಾಗಿದೆ. ತನ್ನ ಶೃಂಗಾರವನ್ನೆಲ್ಲಾ ಮುಗಿಸಿಕೊಂಡು ಹಣೆಗೆ ಕುಂಕುಮವನ್ನಿಟ್ಟುಕೊಳ್ಳುತ್ತಿರುವುದನ್ನು ಸೂಚಿಸುತ್ತದೆ. ತನ್ನ ಸೌಂದರ್ಯವನ್ನು ನೋಡಿಕೊಳ್ಳಲೋಸುಗ ಕನ್ನಡಿಯನ್ನು ನೋಡಿ ತನ್ನ ಸೌಂದರ್ಯವನ್ನು ನೋಡಿ ಹಿಗ್ಗುವುದೂ ಒಂದು ದೃಶ್ಯ ಇನ್ನೊಂದು ಸಂದರ್ಭದಲ್ಲಿ ಸೀರೆಯನ್ನುಟ್ಟುಕೊಳ್ಳುತ್ತಿರುವಾಗ್ಗೆ ಒಂದು ಚೇಳನ್ನು ಕಂಡು ಭಯಚಕಿತಳಾಗಿ ಸೀರೆಯನ್ನು ಮುದುರಿ ಹಿಡದುಕೊಂಡಿರುವ ನೋಟದಲ್ಲಿ ನಾಚಿಕೆಯೂ ಭಯವೂ ಇದೆ. ಕೆಲವು ಕಡೆ ಶಿಲ್ಪಿಯು ಹೆಂಗಸರ ಹತ್ತಿರ ಕಪಿಯನ್ನು ತಂದಿರುವುದು ಸ್ವಾಭಾವಿಕವಾದರೂ ಚೇಷ್ಟೆಯ ಸ್ವಭಾವವನ್ನು ವ್ಯಕ್ತಪಡಿಸುತ್ತದೆ.

ನವರಂಗದ ನೋಟವನ್ನು ಪ್ರೇಕ್ಷಕರು ಕನ್ನಡಿಗಳಿಂದ ಬರುವ ಪ್ರತಿಬಿಂಬಗಳಿಂದಲೂ ವಿಶೇಷ ಪ್ರಕಾಶಮಾನವಾದ ವಿದ್ಯುದ್ದೀಪಗಳ ಸಹಾಯದಿಂದಲೂ ನೋಡಬಹುದು. ಇಲ್ಲಿರುವ ಮದನಕೈ ಬೊಂಬೆಗಳ ವಿವರ ಈ ರೀತಿ ಇದೆ.

೧) ಸೌಂದರ್ಯಸೂಚಕ ವಿಗ್ರಹ—ಒಬ್ಬಳು ತನ್ನ ಮುದ್ದಿನ ಗಿಣಿ (Pet parrot) ಯನ್ನು ರಟ್ಟೆಯ ಮೇಲೆ ಕೂರಿಸಿಕೊಂಡಿರುವುದು-ಅದರ ಕೊಕ್ಕಿನಲ್ಲಿ ಅಮೂಲ್ಯವಾದ ಕಂಠಾಭರಣವನ್ನು ಕಚ್ಚಿಕೊಂಡಿರುವುದನ್ನು ಕಾಣಬಹುದು. ಈ ಬಗೆಯ ಸಿರಿವಂತಿಕೆಯ ಷೋಕಿ ಆ ಕಾಲದಲ್ಲೇ ಇತ್ತೆಂದು ಗೊತ್ತಾಗುತ್ತದೆ. ಆ ಹೆಂಗಸು ತನ್ನ ಬಲಗೈಗೆ ಹಾಕಿಕೊಂಡಿರುವ ಬಳೆಯನ್ನು ಒಂದು ಇಂಚಿನಷ್ಟು ದೂರ ಅಲ್ಲಾಡಿಸಬಹುದು.

೨) ನೃತ್ಯದ ಹೆಂಗಸು—ಈ ವಿಗ್ರಹದಲ್ಲಿ ಒಂದು ಸಣ್ಣ ಉಂಗುರವನ್ನು ಪ್ರತ್ಯೇಕವಾಗಿ ಅಲ್ಲಾಡಿಸಬಹುದು. ಮೇಲ್ಭಾಗದ ಲತೆಯಲ್ಲಿ ಅನೇಕ ಕಪಿಗಳೂ, ಪಕ್ಷಿಗಳೂ ಇರುವುದನ್ನು ಕಾಣಬಹುದು.

೩) ನರ್ತಿಸುತ್ತಿರುವ ಹೆಂಗಸು—(ನಾಟ್ಯಸರಸ್ವತಿ ಎಂದು ಕರೆಯುತ್ತಾರೆ.)

೪) ಅಲಂಕಾರ ಮಾಡಿಕೊಳ್ಳುತ್ತಿರುವ ಹೆಂಗಸು — ಈ ವಿಗ್ರಹದಲ್ಲಿ ಹೆಂಗಸು ತನ್ನ ಕೂದಲನ್ನು ಬಾಚಿಕೊಂಡು ಸಿಂಗರಿಸಿಕೊಳ್ಳುವಂತಿದೆ ಮೇಲೆ ಲತೆಯಲ್ಲಿ ಎರಡು ಕೋತಿಗಳು ಸಂಭಾಷಣೆ ಮಾಡುತ್ತಿರುವಂತಿದೆ.

ಈ ವಿಗ್ರಹಗಳನ್ನು ಕೊರೆದ ಶಿಲ್ಪಿಯ ಹೆಸರು ಬಿಲ್ಲಿಗ್ರಾಮ ದಾಸೋಜ.

## ಸ್ತಂಭಗಳು

ಮೂಲ ದೇವಾಲಯದ ಒಳಭಾಗದ ಕೆತ್ತನೆಯ ಕೆಲಸವು ಹೊರ ಭಾಗದ ಕೆಲಸಕ್ಕಿಂತಲೂ ಚೆನ್ನಾಗಿದೆ. ನವರಂಗ ಮಂಟಪದಲ್ಲಿರುವ ಕಲ್ಲಿ ಕಂಭಗಳು ಒಟ್ಟು ೪೮. ಇವುಗಳು ಒಂದರಂತೆ ಇನ್ನೊಂದಿಲ್ಲ. ಪ್ರತಿ ಯೊಂದರ ರಚನಾಕ್ರಮದಲ್ಲೂ ವೈವಿಧ್ಯವಿದೆ, ಕಲಾನಿಪುಣತೆಯಿದೆ. ಇವು ಗಳಲ್ಲೆಲ್ಲಾ ಎರಡು ಕಂಭಗಳು ಬಹಳ ಪ್ರಖ್ಯಾತವಾದವುಗಳು (೧) ನರ ಸಿಂಹದೇವರ ಕಂಭ. ಮತ್ತು (೨) ಮೋಹಿನಿ ಕಂಭ. ನರಸಿಂಹದೇವರ ಕಂಭವು ನವರಂಗದ ಆಗ್ನೇಯಕ್ಕಿದೆ. ಬಹಳ ಹಿಂದಿನಕಾಲದಲ್ಲಿ ಮಂಗಳಾ ರತಿಯಾಗುವ ಸಂದರ್ಭದಲ್ಲಿ ಈ ಕಂಭವು ತಿರುಗುತ್ತಿತ್ತಂತೆ. ಇಂದಿಗೂ ಕೂಡ ಈ ಕಂಭಕ್ಕೆ ಮಂಗಳಾರತಿ ಮಾಡುವುದು ರೂಢಿಯಲ್ಲಿದೆ. ಈ ಕಂಭದಲ್ಲಿ ವಿಶೇಷವಾಗಿ ಸಣ್ಣ ಸಣ್ಣ ಕೆತ್ತನೆಯ ಕೆಲಸವನ್ನು ಕಾಣಬಹುದು. ಒಂದು ಕಡಲೆಕಾಳಿನಷ್ಟು ಕಲ್ಲಿನಲ್ಲಿ ಬಸವನನ್ನು, ಅಡಿಕೆಯಷ್ಟರಲ್ಲಿ ಆನೆ ಯನ್ನು ಮಾಡುವುದು ಆ ಕಾಲದ ನಿಪುಣತೆಯನ್ನು ಸೂಚಿಸುತ್ತದೆ.

ಮೋಹಿನಿ ಕಂಭವು ನವರಂಗದ ನೈಋತ್ಯಕ್ಕಿದೆ, ಅಥವಾ ಸುಖ ನಾಸಿಯ ಬಲಭಾಗಕ್ಕಿದೆ. ದಶಾವತಾರಗಳನ್ನೂ ಅಷ್ಟದಿಕ್ಪಾಲಕರನ್ನೂ ಈ ಕಂಭದಲ್ಲಿ ಕೆತ್ತಲಾಗಿದೆ ಇದೇ ಪ್ರಾಯಶಃ ಅತ್ಯಂತ ಸುಂದರವಾದ ಕಂಭ ವೆಂದು ಕೆಲವರ ಅಭಿಪ್ರಾಯ.

ನವರಂಗದ ಮೇಲ್ಭಾಗವು ವಿವಿಧರೀತಿಯ ಕೆತ್ತನೆಯ ಕೆಲಸದಿಂದ ಕೂಡಿದೆ. ಅತ್ಯಂತ ಸುಂದರವೂ ಸೂಕ್ಷ್ಮವೂ ಆದ ಕೆತ್ತನೆಯ ಕೆಲಸ ವನ್ನು ಮಧ್ಯಭಾಗದ ಭುವನೇಶ್ವರಿಯಲ್ಲಿ ಕಾಣಬಹುದು. ಸುಮಾರು ೧೩ ಅಡಿ ಚಾಚ್ಚೌಕ ಮತ್ತು ೬ ಅಡಿ ಆಳವುಳ್ಳ (hollow) ಈ ಭುವನೇಶ್ವ ರಿಯು ಮೇಲ್ಭಾಗದಲ್ಲಿ ಗಂಟೆಯ ಆಕೃತಿಯುಳ್ಳ ೪ ಸೊಗಸಾದ ಕಂಭಗಳ



Bracket Image (Lady and the Mirror)
ತನ್ನ ಸೌಂದರ್ಯವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿರುವ ಮದನಿಕೆ



The Image playing on the Veena
ವೀಣೆಯನ್ನು ನುಡಿಸುತ್ತಿರುವ ವಿಗ್ರಹ

ಮೇಲೆ ನಿಂತಿದೆ. ಪ್ರತಿಯೊಂದು ಕಂಭದ ಮೇಲೂ ಒಂದೊಂದು ಮದನ ಕೈ ಬೊಂಬೆಯನ್ನು ಸ್ಥಾಪಿಸಲಾಗಿದೆ. ಭುವನೇಶ್ವರಿಯ ಮಧ್ಯಭಾಗದಲ್ಲಿ ನರಸಿಂಹಾವತಾರವನ್ನು ಕೊರೆದು ತೋರಿಸಲಾಗಿದೆ ಒಳಭಾಗದಲ್ಲಿ ಮಹಾ ಭಾರತದ ಅನೇಕ ದೃಶ್ಯಗಳನ್ನು ಚಿತ್ರಿಸಿ ಕೊರೆಯಲಾಗಿದೆ.

ನವರಂಗದ ವಾಯುವ್ಯದ ಗೋಡೆಯಲ್ಲಿ ದೇವಸ್ಥಾನದ ನಿರ್ಮಾಣಕ್ಕೆ ಸಂಬಂಧಿಸಿದ ೫೮ ನೆಯ ಶಾಸನವನ್ನು ಕೆತ್ತಲಾಗಿದೆ. ಶಾಸನಗಳ ವಿವರ ಗಳನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

ಸುಖನಾಸಿ ದ್ವಾರ—ಸುಖನಾಸಿಯ ದ್ವಾರದಲ್ಲಿ ಅದ್ಭುತ ಆಕೃತಿಯ ದ್ವಾರಪಾಲಕರುಗಳ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಮೇಲ್ಭಾಗದಲ್ಲಿ ತೊಲೆಯು ವಿಶೇಷವಾಗಿ ಶಿಲ್ಪಕಲಾ ಚಾತುರ್ಯದಿಂದ ಕೂಡಿದ ಕೆತ್ತನೆಯ ಕೆಲಸದಿಂದ ಶೋಭಿಸುತ್ತದೆ. ಮಕರಗಳ ಮತ್ತು ಕಮಾನುಗಳ ಮಧ್ಯ ಭಾಗದಲ್ಲಿ ಲಕ್ಷ್ಮೀಸಮೇತ ನಾರಾಯಣನ ವಿಗ್ರಹಗಳಿವೆ. ಇವುಗಳ ಕೆಳ ಭಾಗದಲ್ಲಿ ಗಾಳಿಯು ಪ್ರವೇಶಿಸುವಂತೆ ಕೆತ್ತನೆಯ ಕೆಲಸವನ್ನು ಮಾಡಲಾ ಗಿರುತ್ತೆ. ಅವುಗಳಲ್ಲಿಯೇ ಗಾಯಕರ—ಮತ್ತು ವಾದ್ಯಗಾರರ ಚಿತ್ರಗಳನ್ನು ಕೊರೆಯಲಾಗಿರುತ್ತೆ. ಸುಖನಾಸಿಯ ಎದುರಿಗಿರುವ ತೊಲೆಯಮೇಲೆ ವಿಷ್ಣು ವಿನ ೨೪ ಮೂರ್ತಿಗಳನ್ನು ಕೊರೆಯಲಾಗಿರುತ್ತದೆ.

ಕೇಶವವಿಗ್ರಹ–ಶ್ರೀಚೆನ್ನಕೇಶವ ವಿಗ್ರಹವು ಪಾದದಿಂದ ಶಿರಸ್ಸುಪೂರ್ತಿ ಸುಮಾರು ೯ ಅಡಿ ಎತ್ತರವಿದ್ದು ೩ ಅಡಿ ಎತ್ತರವುಳ್ಳ ಗರುಡನ ಪೀಠದ ಮೇಲೆ ಶ್ರೀದೇವಿ ಭೂದೇವಿಯರೊಡಗೂಡಿ ನಿಂತು ಮೇಲೆ ಮಕರವಾಹನನಾದ ವರುಣ ಮತ್ತು ಮೊದಲನೇ ಸಾಲಿನಲ್ಲಿ ದಶಾವತಾರವೂ ಎರಡನೆಯ ಸಾಲಿ ನಲ್ಲಿ ಎರಡು ಚತುರ್ವ್ಯೂಹ ಮೂರ್ತಿಗಳಿಂದ ಕೇಶವಾದಿ ದಾಮೋದರ ಪೂರ್ತಿ ಯಾದ ದ್ವಾದಶ ಮೂರ್ತಿಗಳೂ, ಇದರ ಮೇಲೆ ೩ ನೆಯ ಸಾಲಿನಲ್ಲಿ ಪತ್ನೀ ವಾಹನ ಸಮೇತರಾದ ಅಷ್ಟದಿಕ್ಪಾಲಕರು, ಮಧ್ಯೆ ಸಿಂಹಲಲಾಟದಿಂದ ಕೂಡಿ ರುವ ಪ್ರಭಾವಳಿ—ಈ ಮಧ್ಯೆ ಸಾಪಿಸಲ್ಪಟ್ಟಿರುತ್ತದೆ. ಪೀಠದಲ್ಲಿ ಕೆತ್ತಿರುವ ಶಾಸನವು ಈ ರೀತಿ ಇದೆ.

" ವಿಷ್ಣುರ್ಜಿಷ್ಣುರ್ಮಹೀಪಾಲಃ ಪಾಲಿತಾಖಿಲ ಭೂತಲಃ |
ದೇವ ದೇವೇಶ ವಿಜಯನಾರಾಯಣಮಚೀಕರತ್ " ||

ಶಿಲೆಯಲ್ಲಿ ಕರ್ಣಕುಂಡಲವೂ ಮಕರಕುಂಡಲವಾಗಿರುತ್ತೆ. ಹಾಕ ತಕ್ಕ ಆಭರಣ ಮಾತ್ರ ಕಮಲಕುಂಡಲ ಪೀಠದಲ್ಲಿ ವಿಷ್ವಕ್ಸೇನ, ನವನೀತ ಕೃಷ್ಣ, ಯಾಗಮೂರ್ತಿ, ಬಲಿಮೂರ್ತಿ, ಸ್ಥಾಪನಮೂರ್ತಿ ಈ ರೀತಿಯಾಗಿ ಲೋಹವಿಗ್ರಹಗಳಿವೆ. ಕೇಶವದೇವರ ಉತ್ಸವ ಮೂರ್ತಿ ಅಮ್ಮನವರ ವಿಗ್ರಹ ಗಳು ಎರಡು ಇವೆ. ಇವುಗಳನ್ನು ಪಂಚಲೋಹಗಳಿಂದ ಮೂರ್ತಿ ಲಕ್ಷಣ ಗಳನ್ನನುಸರಿಸಿ ತಯಾರಿಸಿರುತ್ತಾರೆ. ಈ ದೇವಸ್ಥಾನದಲ್ಲಿ ಹಿಂದೆ ಇದ್ದ ಉತ್ಸವ ಮೂರ್ತಿ ಬನ್ನಿಮಂಟಪಕ್ಕೆ ಉತ್ಸವ ಬಿಜಯಮಾಡಿದಾಗ್ಗೆ ಪಾಳೈಯಗಾರರ ದಾಂಧಲೆಯಲ್ಲಿ ತೀರ್ಥಹಳ್ಳಿ ತಾಲ್ಲೂಕು ಬಾಳಗಾರದಲ್ಲಿ ಪ್ರತಿಷ್ಠಿತವಾಗಿರುತ್ತದೆಂದು ಪ್ರತೀತಿ ಇದೆ.

ಮೂಲದೇವರನ್ನು ಕೇಶವದೇವರೆಂದೂ, ವೇಲಾಪುರಿ ಸೌಮ್ಯ ಕೇಶವ ದೇವರೆಂದೂ, ಚೆನ್ನಕೇಶವದೇವರೆಂದೂ ಧ್ಯಾನಿಸುತ್ತಾರೆ. ವಿಷ್ಣುವರ್ಧನ ರಾಜನು ಕ್ರಿ. ಶ. ೧೧೧೭ ರಲ್ಲಿ ವಿಜಯ ನಾರಾಯಣ ದೇವರನ್ನು ಪ್ರತಿಷ್ಠಿಸಿ ರುವುದಾಗಿ ಕಂಡುಬಂದರೂ ರೂಢಿಯಲ್ಲಿ ಚೆನ್ನಕೇಶವದೇವರೆಂದೇ ಹೆಸರು ಬಂದಿರುತ್ತದೆ.

ಮುಖ ಮುದ್ರೆಯಲ್ಲಿ ಸೌಮ್ಯಭಾವವು ಕಾಣಬರುತ್ತದೆ. ಹಸನ್ಮುಖಿ ಯಾಗಿರುವಂತೆ ಕಾಣಬರುತ್ತದೆ. ಮೋಹಿನಿ ಅವತಾರದ ಮೂರ್ತಿಯಾಗಿ ರುವ ಕಾರಣದಿಂದ ಮೂಗಿನಲ್ಲಿ ಮೂಗುತಿ ಇದೆ. ನಾಲ್ಕು ಕೈಗಳುಳ್ಳವ ನಾಗಿ ಶಂಖ ಚಕ್ರ ಗದಾ ಪದ್ಮಧಾರಿಯಾಗಿ ದಿವ್ಯಾಭರಣಗಳಿಂದ ಅಲಂಕೃತ ವಾಗಿ– " ಅಲಂಕಾರ ಪ್ರಿಯೋ ವಿಷ್ಣುಃ " ಎಂಬ ವಾಕ್ಕಿಗೆ ತಕ್ಕಂತೆ ಅನ್ವ ಯಿಸುವಂತೆ ಮೂರ್ತಿಯ ಸಾನ್ನಿಧ್ಯವಿದ್ದೆಡೆಯಲ್ಲಿ ಭೂವೈಕುಂಠ. ಸಾಲಿ ಗ್ರಾಮ ಮಾಲೆಯಿಂದಲೂ ತುಳಸೀ ಹಾರಗಳಿಂದಲೂ ತೇಜಃಪುಂಜವಾಗಿ ರುವ ಮೂರ್ತಿಗೆ ರಾಜಮಹಾರಾಜರುಗಳು ತಮ್ಮ ಅನನ್ಯ ಭಕ್ತಿಯ ಕುರು ಹಾಗಿ ಅಮೂಲ್ಯವಾದ ಆಭರಣಗಳನ್ನು ಕಾಣಿಕೆಯಾಗಿ ಒಪ್ಪಿಸಿರುತ್ತಾರೆ.

ಹಿಂದೆ ಹೊಯಿಸಳ ಬಲ್ಲಾಳರೂ ವಿಜಯನಗರದ ಅರಸರೂ ಕೊಟ್ಟ ಆಭರಣಗಳು ಪರಕೀಯರಿಂದ ದೋಚಲ್ಪಟ್ಟು ಈಗಿರುವ ಆಭರಣಗಳು ೧೮ನೆಯ ಶತಮಾನದಿಂದ ಈಚೆಗೆ ಕೊಡಲ್ಪಟ್ಟವುಗಳಾಗಿವೆ. ಇವುಗಳ ಪೈಕಿ ೧೭೧೩ರಲ್ಲಿ ಮೈಸೂರಿನ ದೊಡ್ಡ ಕೃಷ್ಣರಾಜ ಒಡೆಯರ್‌ರವರು ಸೌಮ್ಯ

ನಾಯಕಿ ಅಮ್ಮನವರಿಗೆ ಕೊಟ್ಟ ಕಮಲಹಸ್ತದಲ್ಲಿ ಬರೆದಿರುತ್ತೆ. ದೊಡ್ಡ ದೇವರಿಗೆ ಸುಮಾರು ಒಂದು ಅಡಿ ಚದುರವುಳ್ಳ ಗಂಡಭೇರುಂಡ ಪದಕವೂ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ನಾಮಾಂಕಿತದಿಂದ ಕೊಟ್ಟ ಭಂಗಾರದ ಬಟ್ಟಲು ಮತ್ತು ಬೆಳ್ಳಿಯ ಬಿಂದಿಗೆ—ವಜ್ರಪದಕದಿಂದ ಕೂಡಿದ ಮುತ್ತಿನ ಕಂಠಿ, ನವರತ್ನದಿಂದ ಪೇರಿದ ಮುತ್ತಿನ ಕಠಾಣಿ, ಕಂಠಾಭರಣ ಮುಂತಾದವುಗಳು ಮೈಸೂರು ಧೊರೆಗಳು ಭಕ್ತಿಯಿಂದ ಸಮರ್ಪಿಸಿದ ದಿವ್ಯಾಭರಣಗಳಾಗಿವೆ.

ನಮ್ಮ ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್‌ರವರು ಅವರ ದೊಡ್ಡಪ್ಪಂದಿರಾದ ಕೀರ್ತಿಶೇಷ (ವೈಕುಂಠವಾಸಿಗಳಾದ) ರಾದ ಶ್ರೀಕೃಷ್ಣರಾಜ ಒಡಯರ್‌ರವರ ಭಕ್ತಿವಿಗ್ರಹದ ಪ್ರತಿಷ್ಠಾಪನ ಕಾಲದಲ್ಲಿ ನವರತ್ನ ಮತ್ತು ಪಚ್ಚೆಯಿಂದ ಕೂಡಿರುವ ಒಂದು ದಿವ್ಯವಾದ ಪದಕವನ್ನು ಅರ್ಪಿಸಿದ್ದಾರೆ. ವಿಶೇಷ ಸಂದರ್ಭಗಳಲ್ಲಿ ಮಾತ್ರ ಮೂಲ ದೇವರಿಗೆ ಈ ಆಭರಣಗಳಿಂದ ಅಲಂಕರಿಸುತ್ತಾರೆ.

ಈ ದೇವಸ್ಥಾನದಲ್ಲಿ ಪಂಚರಾತ್ರ ಆಗಮದ ರೀತ್ಯಾ ದ್ವಿಕಾಲ ಪೂಜಾ ವಿಧಿಗಳು ನಡೆಯುತ್ತಿವೆ. ಪೂಜಾ ಕಾಲದಲ್ಲಿ ಅಂವರೆ ಬೆಳ್ಳಿತಟ್ಟೆಯಲ್ಲಿ ಸಿದ್ಧ ಮಾಡಿರತಕ್ಕ ತುಳಸಿಯನ್ನು ಮೂಲದೇವರ ಬಳಿ ಸಹಸ್ರ ನಾಮಾರ್ಚನೆಯನ್ನು ಮಾಡತಕ್ಕ ಕಾಲದಲ್ಲಿ ಅಧ್ಯಾಪಕರು ಮುಕುಂದಮಾಲಾ ಸ್ತೋತ್ರ ಅಥವಾ ಆಳ್ವಂದಾರ್ ಸ್ತೋತ್ರ ಹೇಳತಕ್ಕದ್ದೆಂದು ನಿಯಮವಿದೆ. ಉಭಯ ಸ್ಥಾನೀಕರು ಉಭಯಪಾರ್ಶ್ವಗಳಲ್ಲೂ ನಿಂತು ಚಾಮರ ಹಾಕತಕ್ಕದ್ದು. ಸಹಸ್ರನಾಮದವರು ಗರ್ಭಾಂಕಣದ ಹೊಸಲಬಳಿ ನಿಂತು ಸಹಸ್ರನಾಮ (ವಿಷ್ಣು ಸಹಸ್ರನಾಮ)ವನ್ನು ಹೇಳತಕ್ಕದ್ದೆಂದಿದೆ. 'ಸುಖನಾಸಿಯ ವುರುಟ ಕಂಭದ ಬಳಿ ಸ್ಥಾನೀಕರು ಬೀಸಣಿಗೆ ಬೀಸುತ್ತಾರೆ. ಸಹಸ್ರನಾಮವಾದ ನಂತರ ಅರ್ಚಕರು ಗುಂಭಾರ್ತಿಯನ್ನು ಮಂಗಳಾರತಿ ಮಾಡುತ್ತಾರೆ. ಇವೇ ಮುಂತಾದ ವಿವರಗಳು ದೇವಸ್ಥಾನದ ಕೈಪಿಡಿಯಲ್ಲಿ ಕೊಡಲ್ಪಟ್ಟಿವೆ. ಪ್ರತಿ ದಿನವೂ ಮೂಲದೇವರಿಗೆ, ಉತ್ಸವಮೂರ್ತಿಗೆ, ಜಯವಿಜಯರು, ಕಂಭದ ನರಸಿಂಹ ದೇವರುಗಳಿಗೆ ಮಂಗಳಾರತಿ ಆದನಂತರ ಅಮ್ಮನವರಿಗೂ, ಸುತ್ತಲ ಗುಡಿಯ ದೇವರುಗಳಿಗೂ ಪೂಜೆ ಸಲ್ಲುತ್ತದೆ. ಈ ಪ್ರಕಾರವಾಗಿ ವೈಕುಂಠದ

ಲಕ್ಷಣಗಳಿಂದ ಭೂಲೋಕದಲ್ಲಿ ವಿರಾಜಿಸುತ್ತಿರುವ ಶ್ರೀ ಕೇಶವ ದೇವರು ಮೋಹಿನಿ ಅವತಾರವೆಂದು ಮೇಲೆ ತಿಳಿಸಲಾಗಿದೆಯಷ್ಟೆ. ಪ್ರತಿ ವರುಷವೂ ರಥೋತ್ಸವವು ಚೈತ್ರಶುದ್ಧ ದ್ವಾದಶಿಯ ದಿನದಲ್ಲಿ "ಡೋಲಾಯಮಾನಂ ಗೋವಿಂದಂ ಮಂಚಸ್ಥಂ ಮಧುಸೂದನಂ| ರಥಸ್ಥಂ ಕೇಶವಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೆ.'' ಎಂಬ ಮರ್ಯಾದೆಯಲ್ಲಿ ದಿವ್ಯರಥಾರೋಹಣವಾಗುತ್ತದೆ. ಅದಾದನಂತರ ಕಡೆಯದಾಗಿ "ಭಜಾಮ್ಯಹಂ ಶ್ರೀವಸುಧಾ ಸಮೇತಂ ಭಸ್ಮಾಸುರಧ್ವಂಸಕಮಿಂದುವಕ್ತ್ರಂ || ಯೋಷಾಕೃತಿಂ ಬಿಭ್ರದಮಂಬುಜಾಕ್ಷಂ ಶ್ರೀಕೇಶವಂ ದಿವ್ಯಮನಂತರೂಪಂ |'' ಎಂಬ ಮರ್ಯಾದೆಯಲ್ಲಿ ದಿವ್ಯ ಮೋಹಿನೀ ಅಲಂಕಾರೋತ್ಸವವು ನೆರವೇರುತ್ತದೆ.

ಶಾಸನಗಳಲ್ಲಿ 'ಬೇಲುಹೂರು' 'ವೇಲಾಪುರಿ' 'ದಕ್ಷಿಣ ವಾರಾಣಸಿ' ಎಂದು ಪ್ರಖ್ಯಾತವಾಗಿರುವ ಬೇಲೂರಿನ ಸ್ಥಳ ಮಹಾತ್ಮೆಯಿಂದ ಕೆಲವು ಗಹನವಾದ ಅಂಶಗಳು ವ್ಯಕ್ತಪಡುತ್ತವೆ. ವೇಲಾಪುರಿ ಎಂಬ ಕ್ಷೇತ್ರವೇ ಭೂವೈಕುಂಠವೆಂದು ಸ್ಥಳ ಮಹಾತ್ಮೆಯ ಧ್ಯಾನ ಶ್ಲೋಕದಲ್ಲಿ ಉಲ್ಲೇಖಿತವಾಗಿದೆ. ಮೈಸೂರು ಸಂಸ್ಥಾನದ ಮುಜರಾಯಿ ಇಲಾಖೆಯಿಂದ ಅಧಿಕೃತವಾಗಿ ಶ್ರೀ ಬಿ. ರಾಮಯ್ಯನವರಿಂದ ರಚಿತವಾಗಿ ಪ್ರಕಟವಾಗಿರುವ ಶ್ರೀ ವೇಲಾಪುರೀ ಸೌಮ್ಯಕೇಶವ ದೇವರ ದೇವಸ್ಥಾನದ ಮ್ಯಾನ್ಯುಯಲ್ ಯಾ ಕೈಪಿಡಿಯಲ್ಲಿ ಸ್ಥಳಮಹಾತ್ಮೆ ವರ್ಣಿಸಲಾಗಿದೆ.

ಬೇಲೂರಿಗೆ ಉತ್ತರ ದಿಕ್ಕಿನಲ್ಲಿರುವ ಚಂದ್ರದ್ರೋಣ ಪರ್ವತದಲ್ಲಿ ಇಂದ್ರದ್ಯುಮ್ನ ಮಹಾರಾಜನು ಅಲನೆಯ ಕೃತಯುಗ ವೈವಸ್ವತ ಮನ್ವಂತರದಲ್ಲಿ ಆದಿಕೇಶವನೆಂದು ನಾಮಾಂಕಿತನಾದ ಶ್ರೀ ಸೌಮ್ಯ ಕೇಶವ ಮೂರ್ತಿಯನ್ನು ದಿವ್ಯರಥದಲ್ಲಿ ಬಿಜಯಮಾಡಿಸಿ ಶ್ರೀ ವೈಕುಂಠಲೋಕಕೆ ಹೋದದ್ದರಿಂದ ಕಲಿಯುಗವು ಬರುವವರೆಗೂ ದೇವಾದಿಗಳು ಆ ಪರ್ವತದಲ್ಲಿಯೇ ಪೂಜಿಸುತ್ತಿದ್ದರೆಂತಲೂ,— ವಿಷ್ಣುವರ್ಧನನಿಗೆ ಸ್ವಪ್ನದಲ್ಲಿ ಶ್ರೀ ಕೇಶವ ದೇವರು ಬ್ರಾಹ್ಮಣಾಕೃತಿಯಲ್ಲಿ ಕಾಣಿಸಿಕೊಂಡು ತನಗೆ ಒಂದು ದೇವಸ್ಥಾನ ಕಟ್ಟಿಸಬೇಕೆಂದು ಆಜ್ಞಾಪಿಸಿದ್ದಾಗಿಯೂ ಆ ಸ್ವಪ್ನದ ವಿವರ ರಾಜಗುರುಗಳಾದ ಶ್ರೀರಾಮಾನುಜಾಚಾರ್ಯರಿಗೆ ತಿಳಿಸಿದ್ದಾಗಿಯೂ ಅನಂತರ ಅಲ್ಲಿಗೆ ಋಷಿವರ್ಯರ ಸಮೇತ ಹೋಗಿ ಅಲ್ಲಿಂದಾ ಶ್ರೀ ಸೌಮ್ಯಕೇಶವ

ಮೂರ್ತಿಯನ್ನು ಚಂದ್ರದ್ರೋಣ ಪರ್ವತದಿಂದ ನಾರಾಯಣಪುರಕ್ಕೆ ಬಿಜಯಮಾಡಿಸಿಕೊಂಡು ಬಂದರು. ಅನಂತರ ವಿಶ್ವಕರ್ಮಾಂಶದಿಂದ ಹುಟ್ಟಿದ ಬಡಗಿಯಿಂದ ಏಳು ರಾತ್ರಿಗಳಲ್ಲಿ ನಿರ್ಮಿಸಿದ್ದ ಅದ್ಭುತ ದೇವಾಲಯದಲ್ಲಿ ನಾರಾಯಣಪುರದಿಂದ ವೇಲಾಪುರಿಯನ್ನು ಪ್ರವೇಶಮಾಡಿಸಿದರೆಂದು ಗೊತ್ತಾಗುತ್ತದೆ. ಲಕ್ಷ್ಮಿಯು ಕುಪಿತಳಾಗಿ ಚಂದ್ರದ್ರೋಣ ಪರ್ವತದಲ್ಲಿಯೇ ನೆಲೆಸಿದ್ದಾಳೆಂದು ಸ್ಥಳದ ಐತಿಹ್ಯವಿದೆ. ಇವೆಲ್ಲ ವಿವರಣೆಯು ಈ ಶ್ಲೋಕದಲ್ಲಿ ಅಳವಡಿಸಲ್ಪಟ್ಟಿದೆ.

"ಆದೌ ಪದ್ಮಭವಾರ್ಚಿತಃ ಕೃತಯುಗೇ ತೇನೈವ ಸಂಸ್ಥಾಪಿತೋ
ದ್ರೋಣಾದ್ರೌತು ಯುಗಾಂತಿಮೇ ನರಪತೇ ಶ್ರೀ ವಿಷ್ಣುದೇವಸ್ಯಚ ||
ಭಕ್ತ್ಯಾಕಾರಿತ ನಿತ್ಯಧಾಮ್ನಿನಿಲಯಃ ಶ್ರೀ ಕೇಶವೋ ಭೂತ್ತದಾ,
ಭೂವೈಕುಂಠಮಿದಂ ವಿಭಾತಿ ವಿದುಷಃ ವೇಲಾಪುರೀ ಭೂತಳೇ ||

ಬೇಲೂರಿನ ಶಿಲನೆಯ ಶಾಸನದಲ್ಲಿ ಈ ರೀತಿಯ ಧ್ಯಾನ ಶ್ಲೋಕವಿದೆ.

"ಶ್ರೀ ಮತ್ರೈಲೋಕ್ಯ ಪೂಜ್ಯಾಯ
ಸರ್ವಕರ್ಮಸುಸಾಕ್ಷಿಣೆ|
ಫಲದಾಯ ನಮೋನಿತ್ಯಂ
ಕೇಶವಾಯ ಶಿವಾಯುಚ||

## ಕಪ್ಪೆ ಚೆನ್ನಿಗರಾಯ ದೇವಸ್ಥಾನ

ದೇವಸ್ಥಾನದ ಒಳ ಆವರಣದೊಳಗೆ ಸುಮಾರು ೩೦ ಕ್ಕೆ ಮೇಲಾಗಿ ಸಣ್ಣ ಸಣ್ಣ ಕಲ್ಲುಕಟ್ಟಡಗಳಿವೆ. ಮೂಲದೇವಾಲಯದ ದಕ್ಷಿಣಕ್ಕಿರುವ ಕಪ್ಪೆ ಚೆನ್ನಿಗರಾಯ ದೇವಸ್ಥಾನವು ಬಹು ಮುಖ್ಯವಾದುದು ೧೨೪ ರಿಂದಾ ೧೦೫ ಅಡಿ ವಿಸ್ತೀರ್ಣವುಳ್ಳ ಈ ದೇವಾಲಯಕ್ಕೆ ಎರಡು ದ್ವಾರಗಳು—ಪೂರ್ವದಿಂದಲೂ ಉತ್ತರದಿಂದಲೂ ಇವೆ. ಪೂರ್ವಕ್ಕೆ ಸುಖನಾಸಿಯಿರುವ ಕಪ್ಪೆ ಚೆನ್ನಿಗರಾಯ ವಿಗ್ರಹವೂ ಉತ್ತರಕ್ಕೆ ವೇಣುಗೋಪಾಲನ ವಿಗ್ರಹವೂ ಪ್ರತಿಷ್ಠಿತವಾಗಿವೆ.

ಈ ದೇವಸ್ಥಾನವನ್ನು ವಿಷ್ಣುವರ್ಧನನ ಪಟ್ಟಮಹಿಷಿಯಾದ ಶಾಂತಲಾದೇವಿಯು ೧೧೧೭ ರಲ್ಲಿ ಕಟ್ಟಿಸಿದಳೆಂದು ಕಪ್ಪೆ ಚೆನ್ನಿಗರಾಯನ ಪೀಠದ ಮೇಲೆ ಕೆತ್ತಿರುವ ಶಾಸನದಿಂದಾ ಗೊತ್ತಾಗುತ್ತದೆ.

" ಶಾಂತಿಕೃತ್ಸರ್ವ ಭೂತಾನಾಂ
ಪ್ರತಿಷ್ಠಾ ವಿಷ್ಣು ಕಾಂತಯಾ |
ಚೆನ್ನ ಕೇಶವ ದೇವಸ್ಯ ಶಾಂತಿ
ದೇವ್ಯಾ! ಕೃತೋತ್ತಮಾ ||

ರಚನಾಕ್ರಮದಲ್ಲಿ ಈ ದೇವಸ್ಥಾನವೂ ಕೂಡ ಮೂಲದೇವಸ್ಥಾನವನ್ನನುಸರಿಸಿದೆ. ಇದರ ಒಳಮಂದಿರದಲ್ಲಿ ಐದು ಸಣ್ಣಗುಡಿಗಳಿವೆ. ಅವುಗಳಲ್ಲಿ ಗಣೇಶ, ಸರಸ್ವತಿ, ಲಕ್ಷ್ಮೀನಾರಾಯಣ, ಲಕ್ಷ್ಮಿ, ಶ್ರೀಧರ ಮತ್ತು ದುರ್ಗಾ (ಮಹಿಷಾಸುರಮರ್ದಿನಿ) ಇವುಗಳ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಮಹಿಷಾಸುರಮರ್ದಿನಿಯ ವಿಗ್ರಹವು ಬಹು ಸುಂದರವಾಗಿದೆ. ದೇವತೆಯು ಶಿರಚ್ಛೇದಿತನಾದ ಮಹಿಷಾಸುರನ ಮೈಮೇಲೆ ಕುಣಿದು ತುಳಿದು ಸಂಹರಿಸುತ್ತಿರುವಂತೆ ಇದೆ. ದೇವಸ್ಥಾನದ ಮೇಲ್ಭಾಗ ಕೂಡ ಅದ್ಭುತವಾದ ಶಿಲ್ಪಕಲೆಯಿಂದ ಕೂಡಿದೆ.

ವೇಣುಗೋಪಾಲನ ವಿಗ್ರಹವು ಅಸಂಪೂರ್ಣವಾಗಿದೆ. ಮತ್ತು ಮೊದಲು ಶಾಸನರೀತ್ಯಾ ಸ್ಥಾಪಿತವಾಗಿದ್ದ ಲಕ್ಷ್ಮೀನಾರಾಯಣನ ವಿಗ್ರಹದ ಬದಲು ಸ್ಥಾಪಿಸಲಾಗಿದೆಯೆಂದು ಅಭಿಪ್ರಾಯ ಪಡಲಾಗಿದೆ.

ಕಪ್ಪೆ ಚೆನ್ನಿಗರಾಯನ ವಿಗ್ರಹವು ಹೊಯ್ಸಳರ ಕಾಲದ ಭವ್ಯವಾದ ಶಿಲ್ಪಕಲೆಯ ಪ್ರತೀಕವಾಗಿದೆ. ೧೯೪೯ರ ವರೆಗೆ ಬೇರೆ ವಿಗ್ರಹಕ್ಕೆ ಪೂಜೆ ನಡೆಯುತ್ತಿತ್ತೆಂದು ಗೊತ್ತಾಗುತ್ತದೆ. ಇತ್ತೀಚೆಗೆ ತಾ ೩೦-೧-೧೯ಳಳನೇ ಸ್ವಭಾನು ಸಂವತ್ಸರದ ಮಾಘ ಶುದ್ಧದಲ್ಲಿ ಆಗಮೋಕ್ತವಾಗಿ ಹವನ ಹೋಮಾದಿಗಳು ನಡೆದು ಪ್ರತಿಷ್ಠೆಯಾಗಿ ಎರಡು ವೇಳೆಗಳಲ್ಲಿಯೂ ಪೂಜೆ, ಅಷ್ಟೋತ್ತರ, ರಾಜಾಶೀರ್ವಾದಗಳು ನಡೆಯುತ್ತಾ ಇವೆ. ದೇವಸ್ಥಾನದ ಹೊರಗಡೆ ನೋಡುವಂತಹ ಶಿಲ್ಪಕಲೆಯಿಲ್ಲ.

## ಸೌಮ್ಯನಾಯಕಿ ಅಮ್ಮನವರ ದೇವಸ್ಥಾನ

ವಿಷ್ಣುಪತ್ನಿಯಾದ ಲಕ್ಷ್ಮೀ ದೇವಿಗೆ ಪ್ರತ್ಯೇಕವಾದ ದೇವಾಲಯವು ಕಪ್ಪೆಚೆನ್ನಿಗರಾಯ ಸ್ವಾಮಿದೇವಸ್ಥಾನದ ಪಕ್ಕದಲ್ಲಿದೆ. ಇಲ್ಲಿಯೂ ಪ್ರತಿದಿನವೂ ಪೂಜಾದಿಗಳು ನಡೆಯುತ್ತವೆ. ಈ ದೇವಸ್ಥಾನದ ಮುಂಭಾಗವನ್ನು

ಕಳಲೆ ದಳವಾಯಿ ಅರಸುಗಳ ಸಂತತಿಯವರು ಕಟ್ಟಿಸಿದರೆಂದು ಗೊತ್ತಾಗು ತ್ತದೆ.

## ವೀರನಾರಾಯಣ ದೇವಸ್ಥಾನ

ಮೂಲ ದೇವಸ್ಥಾನದ ಹಿಂಭಾಗದಲ್ಲಿದೆ. ವೀರನಾರಾಯಣನ ವಿಗ್ರಹವು ಶಿಥಿಲವಾಗಿರುವುದರಿಂದ ಪೂಜಾದಿಗಳು ನಡೆಯುತ್ತಿಲ್ಲ. ಆಕಾರದಲ್ಲಿ ಸಣ್ಣದಾದರೂ ಈ ದೇವಾಲಯದಲ್ಲಿ ಅತ್ಯುತ್ತಮವಾದ ಶಿಲ್ಪಕಲೆಯಿದೆ. ಹೊರಭಾಗದಲ್ಲೆಲ್ಲಾ ಸುಂದರವಾದ ವಿಗ್ರಹಗಳಿಂದ ಅಲಂಕೃತವಾಗಿದೆ. ಇವುಗಳಲ್ಲಿ ಭೀಮನು ಭಗದತ್ತನ ಆನೆಯೊಡನೆ ಹೋರಾಡುತ್ತಿರುವುದನ್ನು ಚಿತ್ರಿಸಿ ಕೊರೆಯಲಾಗಿದೆ.

## ಆಂಡಾಳ್ ದೇವಸ್ಥಾನ

ವಿಷ್ಣುಪತ್ನಿಗೆ ಆಂಡಾಳ್ ಎಂದು ಶ್ರೀ ವೈಷ್ಣವರ ಸಂಪ್ರದಾಯದಂತೆ ಇನ್ನೊಂದು ಹೆಸರಿನಿಂದಾ ಅಮ್ಮನವರ ದೇವಸ್ಥಾನವನ್ನು ಇತ್ತೀಚೆಗೆ ವಿಜಯನಗರದ ರಾಜಗುರುಗಳ ಕಾಲದಲ್ಲಿ ಕಟ್ಟಲಾಯಿತೆಂದು ತಿಳಿಯ ಬರುತ್ತೆ. ಈ ದೇವಸ್ಥಾನದ ಹೊರಭಾಗದಲ್ಲಿ ಬಹಳ ಸುಂದರವಾದ ವಿಗ್ರಹಗಳನ್ನು ಸ್ಥಾಪಿಸಲಾಗಿದೆ. ಅವುಗಳಲ್ಲಿ ಭಂಡಾರಿ ಮಧುವಣ್ಣನು ಕೊರೆದ ವೇಣುಗೋಪಾಲನ ವಿಗ್ರಹವೂ ಇದೆ. ಪ್ರತ್ಯೇಕವಾಗಿರತಕ್ಕ ಪ್ರತಿ ವಿಗ್ರಹದಲ್ಲೂ ಮೂರ್ತಿಲಕ್ಷಣವಿದೆ.

ಆಂಡಾಳ್ ದೇವಸ್ಥಾನದ ಉತ್ತರಕ್ಕೆ ಈಚೆಗೆ ಒಂದು ಕಲ್ಲಿನ ಪಡಸಾಲೆಯನ್ನು ಕಟ್ಟಿ ಅಲ್ಲಲ್ಲಿ ದೊರೆತಿರುವ ಕೆಲವು ಶಾಸನಗಳನ್ನು ಮತ್ತು ವಿಗ್ರಹಗಳನ್ನು ಇಡಲಾಗಿದೆ.

## ವಾಸುದೇವ ತೀರ್ಥ

ಪ್ರಾಕಾರದ ಈಶಾನ್ಯಮೂಲೆಯಲ್ಲಿ ಎರಡನೆಯ ಬಲ್ಲಾಳ ರಾಜನ ಕಾಲದಲ್ಲಿ ಕಟ್ಟಲಾಯಿತೆಂದು ತಿಳಿಯಲ್ಪಟ್ಟಿರುವ ವಾಸುದೇವ ತೀರ್ಥವೆಂಬ ಕಲ್ಲು ಕಟ್ಟಡದ ಕೊಳವಿದೆ. ಮೇಲ್ಭಾಗದಲ್ಲಿ ೩೦–೪೦ ಅಡಿಗಳಷ್ಟು ಆಳವಾಗಿದೆ. ಈ ಕೊಳದಲ್ಲಿ ಇತ್ತೀಚೆಗೆ ಕೆಲವು ಸಮುದ್ರದ ಮೀನುಗಳನ್ನು ಬಿಟ್ಟಿರುತ್ತಾರೆ.

ಹಿಂದೆ ಇದ್ದ ನಾಗನಾಯ್ಕನ ಮಂಟಪದ ಮುಂಭಾಗದಲ್ಲಿ ಗರುಡ ನಿಗೆ ಒಂದು ದೇವಸ್ಥಾನವನ್ನು ಬೇಲೂರಿನ ವೆಂಕಟಾದ್ರಿ ನಾಯಕನು ನಿರ್ಮಿಸಿದ್ದನು. ಆದರ ಮುಂದೆ ಹಿತ್ತಾಳೆ ತಗಡಿನ ಒಂದು ಕಂಭವನ್ನು ಕೃಷ್ಣದೇವರಾಯನ ಕಾಲದಲ್ಲಿ ಸ್ಥಾಪಿಸಲಾಗಿತ್ತು. ಈಗ ಆ ಕಂಭವನ್ನು ತೆಗೆಸಿ ಬೇರೊಂದನ್ನು ಅಲ್ಲಿಯೇ ಸ್ಥಾಪಿಸಲಾಗಿದೆ. ಗರುಡನ ವಿಗ್ರಹವು ಮೂಲ ದೇವಸ್ಥಾನದ ಎದುರಿಗೇ ಪೀಠದ ಮೇಲೆ ಸ್ಥಾಪಿತವಾಗಿದೆ.

ನಾಗನಾಯ್ಕನ ಮಂಟಪದ ಪಕ್ಕದಲ್ಲೇ ಕಲ್ಯಾಣಮಂಟಪವಿತ್ತು. ಅದರೊಳಗೆ ಸುಗ್ರೀವನ ವಿಗ್ರಹವು ಸ್ಥಾಪಿತವಾಗಿತ್ತು. ಈ ಮಂಟಪವನ್ನು ಕಂಠೀರವ ನರಸರಾಜ ಒಡೆಯರ್‌ರವರ ಕಾಲದಲ್ಲಿ (೧೬೩೮-೧೬೫೯) ಕಟ್ಟಲಾಗಿತ್ತೆಂದು ಗೊತ್ತಾಗುತ್ತದೆ. ಈ ಮಂಟಪವನ್ನು ಕೂಡ ಈಗ ತೆಗೆ ದಿರುತ್ತಾರೆ.

ದೇವಾಲಯದಲ್ಲಿ ಎಡಭಾಗಕ್ಕೆ ಒಂದು ದೊಡ್ಡ ಕಲ್ಲಿನ ಕಂಭವಿದೆ. ದೀಪಾಲೆ ಕಂಭವೆಂದು ಕರೆಯುತ್ತಾರೆ. ಬೇಲೂರಿನ ೧೪ನೆ ಶಾಸನದ ಪ್ರಕಾರ ೧ನೆಯ ದೇವರಾಯನ ಮಂತ್ರಿಯಾದ ಬೈಚಿಡನ್ನಾಯಕನ ಅಪ್ಪಣೆ ಮೇರೆಗೆ ಕಾರ್ತೀಕ ದೀಪೋತ್ಸವಕ್ಕೋಸ್ಕರ ಈ ಕಂಭವನ್ನೂ ಉಯ್ಯಾಲೆ ಮಂಟಪವನ್ನೂ ೧೪೧೪ರಲ್ಲಿ ಕಟ್ಟಿಸಿದನೆಂದು ವಿಶದಪಡುತ್ತದೆ. ವೀರ ನಾರಾಯಣ ದೇವಸ್ಥಾನದ ದಕ್ಷಿಣಕ್ಕಿರುವ ಮಂಟಪಕ್ಕೆ ವಾಹನಮಂಟಪ ವೆಂದು ಕರೆಯಲಾಗುತ್ತಿತ್ತು ಈಗ ಅದೇ ಮಂಟಪವನ್ನು ವಿಜಯನಗರ ಮಂಟಪವೆಂದು ಕರೆಯಲಾಗುತ್ತಿದೆ. ಆನೆಯ ಬಾಗಿಲಿನ ಎಡಭಾಗಕ್ಕೆ ಪಾಠಶಾಲೆ, ಪಕ್ಕದಲ್ಲಿ ಯಾಗಶಾಲೆ ಇದೆ. ಆನೆಯ ಬಾಗಿಲ ಪಕ್ಕದಲ್ಲಿದ್ದ ವಿಷ್ಣುವರ್ಧನ ಮತ್ತು ಶಾಂತಲಾದೇವಿಯರ ವಿಗ್ರಹಗಳನ್ನು ಉತ್ತರದಿಕ್ಕಿನ ಕೈಸಾಲೆಯಲ್ಲಿಟ್ಟಿರುತ್ತಾರೆ. ಆನೆಯ ಬಾಗಿಲಿನ ಎದುರಿಗಿದ್ದ ವಸಂತಕೊಳ (ಓಕುಳಿ ಗುಂಡಿ)ವನ್ನು ಈಗ ಮುಚ್ಚಿರುತ್ತಾರೆ. ಇನ್ನೂ ಎಷ್ಟೋ ಬದಲಾ ವಣೆಗಳಾಗಿವೆ

ಈ ದೇವಸ್ಥಾನವನ್ನು ಕಟ್ಟಲು ಉಪಯೋಗಿಸಿರತಕ್ಕ ಕಲ್ಲು, ಕಲ್ಲಲ್ಲಿ ಕಲೆಯು, ಪಾರಮಾರ್ಥಿಕ ವಸ್ತುಗಳಲ್ಲಿಯೂ ಉಪಯೋಗಿಸಿರುವುದನ್ನು ಚೆನ್ನಾಗಿ ಅರಿಯಬಹುದು. ಬಹಳ ಹಿಂದಿನ ಕಾಲದಲ್ಲಿಯೇ ಗಾರೆ ಸಿಮೆಂಟ್

ಇವುಗಳ ಬಳಕೆಯಿಲ್ಲದೆ ಅಚ್ಚುಕಟ್ಟಾಗಿ ಜೋಡಿಸಿರುವ ಶಿಲ್ಪಕಲಾನಿಪುಣತೆಯನ್ನು ದೇವಸ್ಥಾನದಲ್ಲಿ ಕಾಣಬಹುದು ಕಟ್ಟಡದ ಸೌಂದರ್ಯಕ್ಕೆ ಕುಂದುಬರದಂತೆ ಕಲ್ಲುಗಳನ್ನು ಜೋಡಿಸಿರುವುದರಲ್ಲಿ ವಿಶೇಷ ಕುಶಲತೆಯಿದೆ. ಹೀಗಿಲ್ಲಾಗಿ ವಿಗ್ರಹಗಳನ್ನು ತಯಾರಿಸಿರುವುದರಲ್ಲಿ ಮೂರ್ತಿಲಕ್ಷಣಗಳನ್ನು ಚೆನ್ನಾಗಿ ಬಲ್ಲವರಾಗಿದ್ದರಲ್ಲದೆ ರಾಮಾಯಣ, ಮಹಾಭಾರತ, ಭಾಗವತದ ಮಹಿಮಾನ್ವಿತ ಪುರುಷರನ್ನು ಚಿತ್ರಿಸಿ ಕೊರೆದಿರುವುದರಲ್ಲೂ ಸಾಹಿತ್ಯ ಸಮೀಕ್ಷೆಗೆ ಸಾಮರಸ್ಯವಿದೆ; ಅವುಗಳ ಪೂರ್ಣಾನುಭವವಿದೆ. ಇಷ್ಟೆಲ್ಲಾ ಪರಿಪಕ್ವವಾದ ಶಿಲ್ಪಕಲಾಕೃತಿಗಳನ್ನು ತಯಾರಿಸಿರುವವರಿಗೆ ಯಾರು ಶಿಕ್ಷಣ ಕೊಟ್ಟರು? ಎಲ್ಲಿ ಶಿಕ್ಷಣ ಕೊಟ್ಟರು? ಮುಂತಾಗಿ ಭ್ರಾಂತಿಯೆಬ್ಬಿಸುವಂತಹ ಪ್ರಶ್ನೆಗಳು ಉದ್ಭವಿಸುತ್ತವೆ ಸಂಕ್ಷೇಪದಲ್ಲಿ ವಿವರಿಸುವುದಾದರೆ ಶ್ರೀಮಾನ್ ಡಿ. ವಿ. ಗುಂಡಪ್ಪನವರ ಮಾತನ್ನೇ ಇಲ್ಲಿ ಉದಹರಿಸಬೇಕಾಗಿದೆ. "ಬೇಲೂರಿನ ಪ್ರಸಿದ್ಧಿ ಈ ಬಗೆಯ ವಾಸ್ತುಶಿಲ್ಪದ ಚಮತ್ಕೃತಿಯ ಕಾರಣದಿಂದ ಬಂದದ್ದಲ್ಲ. ಅದು ಅಲ್ಲಿಯ ವಿಗ್ರಹ ಶಿಲ್ಪದ ಹೃದಯೋದ್ದೀಪನ ಶಕ್ತಿಯಿಂದ ಬಂದದ್ದು. ಅದು ಕಲ್ಲಿನಲ್ಲಾದ ಕಾವ್ಯ. ಈ ಕಾರಣದಿಂದ ಅದರ ಕೀರ್ತಿ."

## ಅರ್ಚನೆಯ ವ್ಯವಸ್ಥೆ

ಶ್ರೀ ಚೆನ್ನಕೇಶ ದೇವಾಲಯದಲ್ಲಿ ಪೂಜಾದಿಗಳು ಮತ್ತು ಉತ್ಸವಗಳು ಸಾರೋಪದ್ಧಾರವಾಗಿ ನಡೆದುಕೊಂಡು ಬರುವಂತೆ ಕೆಲವು ಗ್ರಾಮಗಳನ್ನು ಅರ್ಚಕರಿಗೂ ಸ್ಥಾನೀಕರುಗಳಿಗೂ, ವೇದಪಾರಾಯಣದವರಿಗೂ ವಿಷ್ಣುವರ್ಧನನು ಕೊಟ್ಟಿದ್ದಂತೆ ಗೊತ್ತಾಗುತ್ತದೆ. ಬಿಕ್ಕೋಡು ಗ್ರಾಮವು ೩ನೆಯ ನರಸಿಂಹವರ್ಧನನ ಕಾಲದಲ್ಲಿ ಚೆನ್ನಕೇಶವ ದೇವರಿಗೆ ಕೊಡಲ್ಪಟ್ಟಿತೆಂದು ಬೇಲೂರಿನ ೭೩ನೆಯ ಶಾಸನದಿಂದಾ ಗೊತ್ತಾಗುತ್ತದೆ. ಕಾಲಕ್ರಮೇಣ ಕೆಲವು ದೇವಾಲಯ ಜಮೀನುಗಳು ಆ ಉದ್ದಿಶ್ಯಕ್ಕಲ್ಲದೆ ನಿಂತಿದ್ದವು. ಆದರೆ ವಿಜಯನಗರದ ರಾಜರುಗಳ ಕಾಲದಲ್ಲಿ ಶಿಥಿಲವಾಗಿದ್ದ ದೇವಾಲಯದ ಭಾಗಗಳು ಜೀರ್ಣೋದ್ಧಾರವಾದವು. ಹೊಸದಾಗಿ ಕೆಲವು ಬದಲಾವಣೆಗಳಾದವು ಮತ್ತು ಹಿಂದೆ ನಿಂತುಹೋಗಿದ್ದ ಇನಾಮತಿಗಳನ್ನು ಊರ್ಜಿತಗೊಳಿಸಲಾಯಿತು. ಕೆಲವನ್ನು ಕೆಳಗೆ ವಿವರಿಸಲಾಗಿದೆ.

(೧) ೨ನೆಯ ಹರಿಹರ ಮಹಾರಾಜರ ದಂಡನಾಯಕರಾದ ಗುಂಡ ದಂಡಾಧಿಪರು ದೊಡ್ಡ ದ್ವಾರವನ್ನು ದುರಸ್ತಿ ಮಾಡಿಸಿ ಏಳು ಅಂತಸ್ತುಗಳನ್ನು ಕಟ್ಟಿಸಿ ಅದರ ಮೇಲೆ ಚಿನ್ನದ ಕಳಸವನ್ನಿಡಿಸಿದರು. ಕಲ್ಬುರ್ಗಿಯ ಗಂಗಾ ಸಾಲಾರನು ಮಹಾದ್ವಾರವನ್ನ ಸುಟ್ಟಿದ್ದನು (ಬೇಲೂರು ೩ನೆ ಶಾಸನ).

(೨) ೨ನೆಯಬುಕ್ಕ—ಇವರ ಮಂತ್ರಿಗಳಾದ ಹೆಗ್ಗಪ್ಪ ಮತ್ತು ಮಲ್ಲರಸ ಇವರುಗಳು ಚಿನ್ನದಿಂದ ಅಲಂಕೃತವಾದ ಶಂಖವನ್ನು ದೇವರಿಗೆ ೧೪೦೫ ರಲ್ಲಿ ದಾನವಾಗಿ ಕೊಟ್ಟರೆಂದು ಬೇಲೂರಿನ ೫೬ ನೆಯ ಶಾಸನದಿಂದ ಗೊತ್ತಾಗುತ್ತದೆ.

(೩) ೧ನೆಯ ದೇವರಾಯರ ಮಂತ್ರಿಯಾದ ಬೈಚೇಯ ದಣ್ಣಾಯಕನು ೧೪೧೪ ರಲ್ಲಿ ದೀಪಾಲೆ ಕಂಭವನ್ನು ನಿಲ್ಲಿಸಿ ಉಯ್ಯಾಲೆ ಮಂಟಪ ಕಟ್ಟಿಸಿದನೆಂದು ಗೊತ್ತಾಗುತ್ತದೆ.

(೪) ೧೫೬೬ ರಲ್ಲಿ ವೆಂಕಟಾದ್ರಿ ನಾಯಕರು ನಾಗನಾಯಕನ ಮುಂಭಾಗದಲ್ಲಿ ಗರುಡದೇವನಿಗೆ ಒಂದು ಗುಡಿಯನ್ನು ಕಟ್ಟಿಸಿದರೆಂದು ಗೊತ್ತಾಗುತ್ತದೆ.

(೫) ೧೭೧೩ ರಲ್ಲಿ ಮೈಸೂರಿನ ಧೊರೆಗಳಾಗಿದ್ದ ೧ನೆ ಕೃಷ್ಣರಾಜ ಒಡೆಯರ್‌ರವರು ಅಮ್ಮನವರಿಗೆ ಸುವರ್ಣ ಹಸ್ತವನ್ನು ಒಪ್ಪಿಸಿದರೆಂದು ಅದರಲ್ಲಿ ಬರೆದಿರುವ ಶಾಸನದಿಂದಾ ಗೊತ್ತಾಗುತ್ತದೆ.

(೬) ೧೮೪೯ ಮತ್ತು ೧೮-೩೦ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ರವರ ಆಳ್ವಿಕೆಯಲ್ಲಿ ಸೇವಕ ಐಗೂರು ರಂಗಯ್ಯನಿಂದ ಒಪ್ಪಿಸಲ್ಪಟ್ಟ ಬಂಗಾರದ ಬಟ್ಟಲು ಮುಂತಾದವುಗಳು.

## ಬೇಲೂರಿನ ಶಾಸನಗಳು

ಕೆಲವು ಶಾಸನಗಳನ್ನು ದೇವಸ್ಥಾನದ ಹೊರ ಭಾಗದ ಗೋಡೆಯಲ್ಲಿ ಕೆತ್ತಿರುತ್ತಾರೆ. ಚಿತ್ರದುರ್ಗದ ರಂಗಪ್ಪನಾಯ್ಕರು ಕೂಡ ಅರಸೀಕೆರೆ ತಾಲ್ಲೂಕು ಸೊಪ್ಪಿನಹಳ್ಳಿಯಲ್ಲಿ ಚೆನ್ನಕೇಶವ ದೇವರಿಗೆ ಜಮೀನನ್ನು ೧೫೮೦ ರಲ್ಲಿ ಕೊಟ್ಟರೆಂದು ಗೊತ್ತಾಗುತ್ತದೆ. ಈ ದೇವಸ್ಥಾನಕ್ಕೆ ಸಂಬಂಧಿಸಿದ ಶಾಸನ

ಗಳೆಲ್ಲವನ್ನೂ ಕ್ರೋಢೀಕರಿಸಿ ಅಚ್ಚು ಹಾಕಿರುತ್ತಾರೆ. ಇವುಗಳಲ್ಲೆಲ್ಲಾ ಬೇಲೂರಿನ ೫೮ ನೆಯ ಶಾಸನವು ಬಹು ಮುಖ್ಯವಾದುದು. ದೇವಸ್ಥಾನಕ್ಕೆ ಹಾಗು ಹೊಯ್ಸಳ ಸಂತತಿಗೆ ಸಂಬಂಧಿಸಿದ ಗಹನವಾದ ಅಂಶಗಳು ಇದರಲ್ಲಿ ಒಳಗೊಂಡಿವೆ.

ಶಾಂತಲಾದೇವಿಯ ವಿಚಾರವಾಗಿ ಮೇಲ್ಕಂಡ ಶಾಸನದಲ್ಲಿ ಬಹಳ ಪ್ರಶಂಸಾತ್ಮಕವಾದ ಉಕ್ತಿಗಳಿವೆ. "ವಿಚಿತ್ರ ನರ್ತನಪ್ರವರ್ತಿನ ಶಿಖಾಮಣಿಯುಂ ಸಕಲ ಸಮಯ ರಕ್ಷಾಮಣಿಯುಂ ಸಂಗೀತ ಸಂಗರ ಸರಸ್ವತಿಯುಂ" ಎಂಬ ಶಬ್ದಗಳಲ್ಲಿ ವಿಶೇಷ ಅರ್ಥವಿದೆ. ವಿಷ್ಣುವರ್ಧನರಾಜನನ್ನು ಏಕಾದಶ ಅವತಾರವೆಂದು ಘೋಷಿಸಲಾಗಿದೆ.

ಅಪೂರ್ವ ಶಿಲ್ಪಕಲೆಯಿಂದಲೂ ಪುಣ್ಯವಿಶೇಷಗಳಿಂದಲೂ ಕೂಡಿರುವ ಬೇಲೂರು ದೇವಾಲಯವು ಭರತಖಂಡದಲ್ಲಿ ತನ್ನದ್ದೇ ಆದ ಒಂದು ಅಗ್ರಸ್ಥಾನವನ್ನು ಪಡೆದಿದೆ. ಮೂರು ಲೋಕಗಳಿಗೂ ಅಧಿಪತಿಯಾದ ಪರಮಾತ್ಮನು ಭಕ್ತಜನರ ವಾಂಛಿತಾರ್ಥಗಳನ್ನು ಕರುಣಿಸಲಿ ಎಂಬ ತಾತ್ಪರ್ಯವು ಈ ಶ್ಲೋಕದಲ್ಲಿ ಅಳವಡಿಸಲ್ಪಟ್ಟಿದೆ.

"ಯಂ ಶೈವಾಃಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ|
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಃ|
ಅರ್ಹನ್ ಇತ್ಯಥ ಜೈನಶಾಸನರತಃ ಕರ್ಮೇತಿ ಮೀಮಾಂಸಕಾಃ ||
ಸೋಯಂ ವೋ ವಿಧಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ವಿಭುಃ|

ಬೇಲೂರಿನ ದೇವಸ್ಥಾನವನ್ನು ರಾಷ್ಟ್ರೀಯ ಸ್ಮಾರಕ ( National Monument ) ಎಂದು ಗಣಿಸಿ ಅದರ ರಕ್ಷಣೆಯನ್ನು ಕೇಂದ್ರ ಸರಕಾರದ ಪ್ರಾಚೀನ ವಸ್ತುಸಂಶೋಧನಾ ಇಲಾಖೆಯವರು ಹೊತ್ತಿರುತ್ತಾರೆ. ಇಬ್ಬರು ಕಾವಲುಗಾರರನ್ನು ನಿಯಮಿಸಿರುತ್ತಾರೆ.

---

*

# ಹಳೇಬೀಡಿನ ಕೈಪಿಡಿ

## ಸ್ಥಳ ಪರಿಚಯು

ಶಿಲ್ಪ ಕಲೆಗಾಗಿ—"ಬೇಲೂರು ಒಳಗೆ ನೋಡು; ಹಳೇಬೀಡು ಹೊರಗೆ ನೋಡು" ಎಂಬ ನಾಣ್ಣುಡಿಯಿದೆ. ಈ ಮಾತು ಸಹಜವಾಗಿಯೇ ಇದೆ ಎನ್ನುವುದರಲ್ಲಿ ಸಂಶಯವಿಲ್ಲ. ಕಾಶಿಯನ್ನು ನೋಡಿದವರು ರಾಮೇಶ್ವರಕ್ಕೂ ಹೋಗಿ ಬರುತ್ತಾರೆ. ಆದರೆ ಹಳೇಬೀಡಿಗೆ ಹೋಗುವುದು ಆ ದೃಷ್ಟಿಯಿಂದಲ್ಲ. ಅನತಿದೂರದಲ್ಲಿರುವ ಶಿಲ್ಪಕಲಾವೈಭವದಿಂದ ವಿರಾಜಮಾನವಾಗಿ ಶೋಭಿಸುತ್ತಿರುವ ದೇವಾಲಯಗಳನ್ನು ನೋಡಲೋಸುಗವೇ ಹೋಗುತ್ತಾರೆ.

ಬಾಣಾವರ ರೈಲ್ವೆಸ್ಟೇಷನ್ನಿನಿಂದ ೧೮ ಮೈಲಿ ಪಶ್ಚಿಮಕ್ಕೆ ಅಥವಾ ಬೇಲೂರಿನಿಂದಾ ಬಾಣಾವರದ ಮಾರ್ಗವಾಗಿ ಅರಸೀಕೆರೆಗೆ ಹೋಗುವ ರಸ್ತೆಯಲ್ಲಿ ಹತ್ತು ಮೈಲಿ ದೂರದಲ್ಲಿ ಹಳೇಬೀಡಿದೆ. ಈ ಮಾರ್ಗದಲ್ಲಿ ಬಸ್ಸುಗಳ ಸಂಚಾರ ಸೌಲಭ್ಯವಿದೆ. ಇತ್ತೀಚೆಗೆ ಹಾಸನದಿಂದ ಸಾಲಗಾಮೆ ಮಾರ್ಗವಾಗಿ ಜಿಲ್ಲಾ ಬೋರ್ಡಿನಿಂದಾ ತಯಾರಾಗಿರುವ ರಸ್ತೆಯು ಹಳೇಬೀಡನ್ನು ಸೇರಲು ಅನುಕೂಲವಾಗಿದೆ.

ಬೇಲೂರು ತಾಲ್ಲೂಕಿನ ಹೋಬಳಿ ಕೇಂದ್ರಗಳಲ್ಲೊಂದಾದ ಹಳೇಬೀಡಿನಲ್ಲಿ ಪ್ರಯಾಣಿಕರ ಸೌಕರ್ಯಕ್ಕಾಗಿ ಎರಡನೆ ದರ್ಜೆಯ ಪ್ರವಾಸಿ ಮಂದಿರವೂ, ಒಂದು ಮುಸಾಫರಖಾನೆಯೂ ಇವೆ. ಇವುಗಳು ದೇವಸ್ಥಾನಕ್ಕೆ ಕೇವಲ ಸಮೀಪದಲ್ಲಿವೆ. ಊರಿನಲ್ಲಿ ಪೋಲೀಸ್ ಸ್ಟೇಷನ್, ಆಸ್ಪತ್ರೆ, ಮಾಧ್ಯಮಿಕ ಶಾಲೆ ಮತ್ತು ರೆವಿನ್ಯು ಇನ್‌ಸ್ಪೆಕ್ಟರವರ ಆಫೀಸು ಇವುಗಳಿವೆ. ಪ್ರತಿ ಬುಧವಾರವೂ ಸಂತೆ ನಡೆಯುತ್ತದೆ.

## ಐತಿಹಾಸಿಕ ಹಿನ್ನೆಲೆ

ಈಗಿನ ಹಳೆಯಬೀಡು ಪ್ರಸಿದ್ಧವಾಗಿರುವುದು ಕೆಲವು ಗಮನಾರ್ಹವಾದ ಐತಿಹಾಸಿಕ ಹಿನ್ನೆಲೆಗಳಿಂದ. ವಿಜಯನಗರದ ರಾಜರುಗಳ ಕಾಲದಲ್ಲಿ

ಈ ಹೆಸರು ಬಂದಿತೆಂದು ಗೊತ್ತಾಗುತ್ತದೆ. ಹೊಯ್ಸಳರ ಕಾಲದ ಕೆಲವು ಶಾಸನಗಳಲ್ಲಿ ದೋರಸಮುದ್ರವೆಂದು ತಿಳಿಸಲಾಗಿದೆ. (ಶಾಸನ ೧೧೭ರಲ್ಲಿ "ಶ್ರೀಮನ್ಮಹಾ ಪಟ್ಟಣ ದೋರಸಮುದ್ರ ಬೆಲಹೂರಂ...." ಮುಂತಾಗಿದೆ. ದೋರಸಮುದ್ರವನ್ನು "ದ್ವಾರ ಸಮುದ್ರ" ವೆಂದೂ ಕರೆಯುವುದು ರೂಢಿಯಲ್ಲಿದೆ. ಪ್ರಾಯಶಃ ರಾಷ್ಟ್ರಕೂಟರ ಕಾಲದಲ್ಲಿ ಊರಿನ ಮುಂಭಾಗದಲ್ಲೇ ಇರುವ ಬಹುದೊಡ್ಡ ಕೆರೆಯಿಂದ ಈ ಹೆಸರು ಬಂದಿರಬಹುದೆಂದು ನಿಶ್ಚಯಿಸಬಹುದು. ದೊಡ್ಡಗದ್ದವಳ್ಳಿಯಲ್ಲಿರುವ ಲಕ್ಷ್ಮೀ ದೇವಾಲಯದಂತೆ ಇಲ್ಲಿಯೂ ಕೂಡ ದೇವಸ್ಥಾನದ ಬಿಂಬವನ್ನು ಕೆರೆಯಲ್ಲಿ ಕಾಣಬಹುದು. ಜಾವಗಲ್ಲಿನಿಂದಾ ನೇರವಾಗಿ ಬಂದವರು ಈ ಕೃತಕ ಸನ್ನಿವೇಶದಲ್ಲಿಯೂ ಕಾಣಬರುವ ರಮಣೀಯತೆಯ ಅನುಭವ ಪಡೆಯಬಹುದು.

ಹಳೇಬೀಡು ಪ್ರಾಮುಖ್ಯತೆಯನ್ನು ಪಡೆದುದು ಹೊಯ್ಸಳ ರಾಜರು ಸುಮಾರು ಕ್ರಿ. ಶ.೧೧ನೆ ಶತಮಾನದಲ್ಲಿ ಪಟ್ಟಣವನ್ನು ಕಟ್ಟಿ ವಿಸ್ತರಿಸಿ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಮೇಲೆ. ಮೊದಲು ಪಶ್ಚಿಮ ಚಾಳುಕ್ಯ ರಾಜರನ್ನು ತಮ್ಮ ಅಧಿಪತಿಗಳೆಂದು ಒಪ್ಪಿದ್ದರು. ಕ್ರಮೇಣ ಸ್ವತಂತ್ರರಾಗಿ ದೋರಸಮುದ್ರವೆಂದು ಕರೆಯಲ್ಪಡುತ್ತಿರುವ ಈಗಿನ ಹಳೇಬೀಡನ್ನು ತಮ್ಮ ರಾಜ್ಯದ ರಾಜಧಾನಿಯನ್ನಾಗಿ ಮಾಡಿಕೊಂಡರು. ವಿನಯಾದಿತ್ಯ ರಾಜನ ಕಾಲದಲ್ಲಿ ಹೊಯ್ಸಳ ರಾಜ್ಯವು ವಿಸ್ತರಿಸಲ್ಪಟ್ಟ ಕೊಂಕಣ, ದಕ್ಷಿಣ ಕನ್ನಡ ಜಿಲ್ಲೆ, ಬಯಲುನಾಡು (ವೈನಾಡು), ತಲಕಾಡು ಮತ್ತು ಸಾವಿಮಲೆ ಭಾಗಗಳನ್ನೊಳಗೊಂಡಿತ್ತು. ಅವನ ಮಗನಾದ ಎರೆಗಂಗನು ಚಾಳುಕ್ಯರ ಸೇನೆಯಲ್ಲಿ ದೊಡ್ಡ ದಂಡನಾಯಕನೆಂದು ಪ್ರಖ್ಯಾತನಾಗಿ ಮಾಳವರ ರಾಜಧಾನಿಯಿಂದ ದಾರ್ ಪಟ್ಟಣವನ್ನು ನಾಶಪಡಿಸಿದನೆಂದು ಗೊತ್ತಾಗುತ್ತದೆ. ಅವನು ತಂದೆಯ ಜೀವಿತ ಕಾಲದಲ್ಲೇ ಕಾಲವಾದ ಕಾರಣ ಈತನ ಮಕ್ಕಳು ರಾಜ್ಯಕ್ಕೆ ಉತ್ತರಾಧಿಕಾರಿಯಾದರು. ಅವರಲ್ಲೆಲ್ಲಾ ಬಿಟ್ಟಿಗ ಅಥವಾ ಬಿಟ್ಟಿದೇವನನೇ ರಾಜ್ಯಕ್ಕೆ ಅರ್ಹನೆಂದು ಅಭಿಷಿಕ್ತನಾಗಿ ಕ್ರಿ. ಶ. ೧೧೦೪ರಿಂದಾ ೧೧೪೧ರ ವರೆಗೆ ಆಳಿ ವಿಷ್ಣುವರ್ಧನನೆಂದು ಪ್ರಖ್ಯಾತನಾದನು. ಈ ರಾಜನ ಆಳಿಕೆಯಲ್ಲಿ ಹೊಯ್ಸಳ ರಾಜ್ಯವು ಅತ್ಯಂತ ಉನ್ನತಮಟ್ಟದ ಪ್ರಗತಿಯನ್ನು ಪಡೆಯಿತೆನ್ನಲು ಆ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳು

ಸಾಕ್ಷಿ ನಿದರ್ಶನಗಳಾಗಿವೆ. ಹಳೇಬೀಡಿನಲ್ಲಿ ಕೂಡ ಜಗತ್ಪ್ರಸಿದ್ಧವಾದ ದೇವಾಲಯಗಳಿವೆ. ಅವುಗಳ ವಿಷಯನ್ನೇ ಇಲ್ಲಿ ಹೆಚ್ಚು ಹೇಳಬೇಕೆಂದಿದ್ದೇವೆ. ರಾಜಕೀಯ ಸಂಗತಿಗಳು ಸಂಕ್ಷೇಪವಾಗಿದ್ದರೆ ಸಾಕೆನ್ನಿಸುತ್ತದೆ.

ಅತುಲೈಶ್ವರ್ಯದಿಂದ ತುಂಬಿ ಶೋಭಿಸುತ್ತಿದ್ದ ಅಂದಿನ ದೋರಸಮುದ್ರ ಪಟ್ಟಣವನ್ನು ಕ್ರಿ. ಶ. ೧೩೧೧ರಲ್ಲಿ ಮಲ್ಲಿಕ್ ಕಾಫರನು ೩ನೆಯ ಬಲ್ಲಾಳನ ಕಾಲದಲ್ಲಿ ಕೊಳ್ಳೆ ಹೊಡೆದು ವಿಶೇಷ ಐಶ್ವರ್ಯವನ್ನು ದೋಚಿಕೊಂಡು ದೆಹಲಿಗೆ ಹಿಂತಿರುಗಿದ ಸಂಗತಿ ಇತಿಹಾಸದಿಂದ ತಿಳಿಯಬರುತ್ತದೆ. ಆದರೆ ಅಲ್ಲಿಗೇ ಮುಗಿಯಲಿಲ್ಲ. ಮಹಮ್ಮದ್ ಬಿನ್ ತೊಗಲಖನ ಸೈನ್ಯವು ೧೩೨೭ರಲ್ಲಿ ಪುನಃ ಮುತ್ತಿಗೆ ಹಾಕಿ ದಾಂಧಲೆ ನಡೆಸಿದರು. ಇದಾದ ಕೆಲವು ವರುಷಗಳ ಮೇಲೆ ಕ್ರಿ.ಶ. ೧೩೪೨ರಲ್ಲಿ ಮಧುರೆಯ ಸುಲ್ತಾನನೊಡನೆ ತಿರುಚನಾಪಳ್ಳಿಯ ಹತ್ತಿರ ಹೋರಾಡುವಾಗ್ಗೆ ಮಡಿದನೆಂದು ಗೊತ್ತಾಗುತ್ತದೆ. ಕ್ರಿ ಶ. ೧೩೪೩ರಲ್ಲಿ ವಿರೂಪಾಕ್ಷ ಬಲ್ಲಾಳನು ರಾಜ್ಯಕ್ಕೆ ಅಭಿಷಿಕ್ತನಾಗಿ ಬರುವ ವೇಳೆಗೆ ರಾಜ್ಯವು ಕ್ಷೀಣದೆಸೆಗೆ ಬಂದಿತ್ತು.

ಆ ದೊಡ್ಡ ಸಾಮ್ರಾಜ್ಯದ ಗತವೈಭವದ ಕುರುಹು ವಿಶೇಷವಾಗಿದೆ. ಪುರಾತನ ದೋರಸಮುದ್ರವು ಬಲವಾದ ಕಲ್ಲಿನ ಕೋಟೆ–ಕೊತ್ತಳಗಳಿಂದ ಸುತ್ತುವರಿಯಲ್ಪಟ್ಟಿತ್ತು. ಊರಿನ ಸಮೀಪದಲ್ಲೇ ಕೆಲವು ಅವಶೇಷಗಳು ದೊರೆತಿವೆ. ಅವುಗಳಲ್ಲಿ ಬೆಣ್ಣೆಗುಡ್ಡ ಅಥವಾ 'ಭೂಮಿಗುಡ್ಡ' ವೆಂದು ಕರೆಯಲಾಗುವ ಪ್ರದೇಶದ ಸಮೀಪದಲ್ಲಿಯೇ ಕೆಲವು ಪುರಾತನ ದೇವಾಲಯಗಳ ಭಾಗಗಳು ದೊರೆತಿವೆ. ಇವುಗಳಲ್ಲಿ ನಗರೇಶ್ವರ ದೇವಸ್ಥಾನದ ಕೆಲವು ಸುಂದರವಾದ ಕೆತ್ತನೆಯ ಕಲ್ಲುಗಳು ದೊರೆತಿವೆ. ಮೇಲೆ ವಿವರಿಸಿದ ಬೆಣ್ಣೆಗುಡ್ಡದ ಪೂರ್ವಕ್ಕೆ ಹೊಯ್ಸಳ ಸಾಮ್ರಾಟರು ವಾಸಿಸುತ್ತಿದ್ದ ಅರಮನೆಯ ಮತ್ತು ಅದನ್ನು ಸುರಕ್ಷಿತವಾಗಿ ಸುತ್ತುವರಿದಿದ್ದ ಸಣ್ಣ ಕೋಟೆಯ ಗುರುತುಗಳು ಇವೆ. ಪ್ರಾಚ್ಯ ಸಂಶೋಧನೆಯು ಮುಂದುವರಿದಾಗಲೇ ಹೆಚ್ಚು ವಿವರಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಬೇಲೂರು ಹಳೇಬೀಡು ದೇವಾಲಯಗಳು ರಾಷ್ಟ್ರೀಯ ಸ್ಮಾರಕಗಳಾಗಿ ಪರಿಗಣಿಸಲ್ಪಟ್ಟಿವೆ.

ಪ್ರಕೃತದಲ್ಲಿ ಹಳೇಬೀಡಿನಲ್ಲಿರುವ ದೇವಾಲಯಗಳ ಬಗ್ಗೆ ಕೆಲವು ಮುಖ್ಯ ಅಂಶಗಳನ್ನು ವಾಚಕರ ನೆನಪಿಗೆ ತರಲು ಯತ್ನಿಸಲಾಗಿದೆ.

ಹಳೇಬೀಡಿನ ದೇವಾಲಯಗಳಲ್ಲೆಲ್ಲಾ ಬಹು ಮುಖ್ಯವಾದ ದೇವಾಲಯಗಳು ಯಾವುವೆಂದರೆ —

೧ ಹೊಯ್ಸಳೇಶ್ವರ ದೇವಾಲಯ

೨ ಕೇದಾರೇಶ್ವರ ದೇವಾಲಯ

೩ ಜೈನ ಬಸದಿಗಳು—ಮುಖ್ಯವಾಗಿ ಪಾರ್ಶ್ವನಾಥ ಬಸ್ತಿ

## ಹೊಯ್ಸಳೇಶ್ವರ ದೇವಾಲಯ

ಹೊಯ್ಸಳೇಶ್ವರ ದೇವಾಲಯವು ರಸ್ತೆಗೆ ಬಹಳ ಸಮೀಪದಲ್ಲೇ ಇದೆ. ಈ ದೇವಾಲಯದ ಆಡಳಿತದ ಜವಾಬ್ದಾರಿಯು ಹಾಸನದ ಜಿಲ್ಲೆಯ ಮುಜರಾಯಿ ಆಫೀಸರವರಿಗೆ ಸೇರಿದೆ. ಮೈನರ್ ಮುಜರಾಯಿ ಸಂಸ್ಥೆ ಎಂದು ಪರಿಗಣಿಸಿ ದೇವಸ್ಥಾನದ ವರಮಾನ, ಪೂಜಾದಿಗಳು ಇವುಗಳ ತನಿಖೆ ಬಗ್ಗೆ ಧರ್ಮದರ್ಶಿಗಳನ್ನು ನಿಯಮಿಸಿದ್ದಾರೆ. ರಾಷ್ಟ್ರೀಯ ಸ್ಮಾರಕವೆಂದು ಪರಿಗಣಿಸುವ ಮೊದಲೂ ಕೂಡ ಸಂಸ್ಥಾನದ ಮುಜರೈಕಮೀಷನರವರೂ, ಜಿಲ್ಲಾಧಿಕಾರಿಗಳೂ, ಸಕಲೇಶಪುರದ ಸಬ್‌ಡಿವಿಜನ್ ಆಫೀಸರವರೂ ಮತ್ತು ಬೇಲೂರು ತಾಲ್ಲೂಕು ಅಮುಲ್ದಾರ್ರವರು ಈ ದೇವಾಲಯಗಳ ರಕ್ಷಣೆ ಬಗ್ಗೆ ವಿಶೇಷವಾಗಿ ಗಮನಕೊಡುತ್ತಲೇ ಇದ್ದಾರೆ. ಅಂತೆಯೇ ಅವರ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಕರ್ತವ್ಯವೂ ಆಗಿದೆ ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ದೇಶದ ಶಿಲ್ಪಕಲೆಯ ಔನ್ನತ್ಯದ ಅರಿವಿನಿಂದಲೂ ಪ್ರಾಚೀನ ಕಲಾವಸ್ತುಗಳ ಬಗ್ಗೆ ವಿಶೇಷವಾದ ಆಸಕ್ತಿ ವಹಿಸುತ್ತ ಬಂದಿರುತ್ತಾರೆ. ಹೀಗಾಗಿ ಮೈಸೂರು ದೇಶದಲ್ಲಿ ಹೊಯ್ಸಳರ ಕಾಲದ ಕಟ್ಟಡಗಳನ್ನು, ಸ್ಮಾರಕಗಳನ್ನು ಸುಭದ್ರವಾದ ಸ್ಥಿತಿಯಲ್ಲಿಡುವ ಕೆಲಸವು ಅತಿಶಯವಾದ ವಿತರಣೆಯಿಂದಲೂ, ಅತ್ಯಂತ ಕೌಶಲ್ಯದಿಂದಲೂ ಸಾಗಿದೆಯೆಂದು ಸ್ಪಷ್ಟಪಡಿಸಿದಲ್ಲಿ ಅತಿಶಯೋಕ್ತಿಯಾಗಲಾರದು. ಪ್ರಾಚ್ಯ ಸಂಶೋಧನಾ ಇಲಾಖೆಯ ಡೈರೆಕ್ಟರರವರು ಪ್ರಾಚೀನ ಸ್ಮಾರಕಗಳನ್ನು ಜೀರ್ಣೋದ್ಧಾರ ಮಾಡುವ ಬಗ್ಗೆ ಆಗಿಂದಾಗ್ಗೆ ಅಮೂಲ್ಯ ಸಲಹೆಗಳನ್ನು ಕೊಡುತ್ತಲೇ ಬಂದಿದ್ದಾರೆ.

ಹಳೇಬೀಡಿನಲ್ಲಿರುವ ದೇವಾಲಯಗಳಲ್ಲೆಲ್ಲಾ ಹೊಯ್ಸಳೇಶ್ವರ ದೇವಾಲಯವೇ ದೊಡ್ಡದು. ವಿಷ್ಣುವರ್ಧನನ ಅಧಿಕಾರಿಯಾಗಿದ್ದ ಕೇತಮಲ್ಲನು ಕ್ರಿ. ಶ ೧೨ನೇ ಶತಮಾನದ ಆದಿಭಾಗದಲ್ಲಿ ಈ ದೇವಸ್ಥಾನವನ್ನು ಕಟ್ಟಿಸಿದ

ನೆಂದು ಗೊತ್ತಾಗುತ್ತದೆ. ದೇವಸ್ಥಾನದ ರಚನಾಕ್ರಮ ಬೇಲೂರು ದೇವಾಲಯದ ರೀತಿಯಲ್ಲಿಯೇ ಇದೆ. ಆದರೆ ಕಟ್ಟಡವು ಅಪೂರ್ಣವಾಗಿದೆಯೆಂದು ಪಾಶ್ಚಾತ್ಯ ವಾಸ್ತುಶಿಲ್ಪ ಪ್ರಾಜ್ಞರಾದ ಡಾ|| ಜೇಮ್ಸ್ ಫರ್ಗ್ಯೂಸನ್‌ರವರು ಅಭಿಪ್ರಾಯ ಪಟ್ಟಿರುತ್ತಾರೆ ಆದರೂ ಕೂಡ ನಡೆಇರುವಷ್ಟೇ ಶಿಲ್ಪಕಲಾ ಕೆಲಸವು ವಾಸ್ತುಶಿಲ್ಪದ ಪರಿಪೂರ್ಣತೆಯನ್ನು ವ್ಯಕ್ತಪಡಿಸುತ್ತದೆ ಎಂದು ಅಭಿಪ್ರಾಯ ಮಂಥನಮಾಡಬಹುದು. ಈ ದೇವಸ್ಥಾನದ ರಚನೆಯಲ್ಲಿ ತೋರಿಸಿರುವ ಜಾಣ್ಮೆಯನ್ನು, ಕಲಾನಿಪುಣತೆಯನ್ನು ರೋಮನರ ಕಟ್ಟಡಗಳಲ್ಲಿ ಕೂಡ ಕಾಣಲಾಗುವದಿಲ್ಲ. ಅವರ ವಾಕ್ಯಗಳನ್ನೇ ಕೊಟ್ಟಲ್ಲಿ ಅರ್ಥವು ಇನ್ನೂ ಸ್ಪಷ್ಟವಾಗಬಹುದು.

" The great temple at Halebid had it been completed is one of the buildings on which the advocate of Hindu Architecture would desire to take his stand. The artistic combination of horizontal with vertical lines, and the play of light and shade far surpass anything in Gothic art. The effects are just what medieval architects were often aiming at, but they never attained so perfectly."

ದೇವಸ್ಥಾನವು ಪೂರ್ವಾಭಿಮುಖವಾಗಿ ಐದಡಿ ಎತ್ತರದ ಜಗುಲಿಯ ಮೇಲೆ ರಚಿತವಾಗಿದೆ. ನಕ್ಷತ್ರಾಕೃತಿಯ ಗರ್ಭಗೃಹ—ಹೊರಭಾಗದಲ್ಲಿ ಕೆಳಗಿನಿಂದ ಮೇಲಿನವರೆಗೂ ಬೇಲೂರು ದೇವಾಲಯದಲ್ಲಿರುವಂತೆ ಆನೆಯ ಸಾಲುಗಳು, ಸಿಂಹಗಳ ಸಾಲಗಳೂ, ಲತಾಪುಷ್ಪಗಳೂ ಕಲ್ಲಿನ ಸುರಳಿಗಳೊಳಗೆ ದೇವತೆಗಳು, ತಪಸ್ವಿಗಳು, ಸಿದ್ಧರು, ನಾನಾ ರೀತಿಯ ಮೃಗಪಕ್ಷಿಗಳನ್ನೊಳಗೊಂಡ ಕಲ್ಲುಚಪ್ಪಡಿಗಳಿಂದ ಅಲಂಕೃತವಾಗಿದೆ ಮಾತ್ರವಲ್ಲದೆ ಪುರಾಣ ಪ್ರಸಿದ್ಧರಾದ ವೀರರು, ಮಹಾಪುರುಗಳು, ರಾಮಾಯಣ, ಮಹಾಭಾರತ, ಭಾಗವತಕ್ಕೆ ಸಂಬಂಧಿಸಿದ ಚಿತ್ರಗಳೂ ವಿಪುಲವಾಗಿ, ಅದ್ಭುತವಾಗಿ ಕೆತ್ತಿರುವುದನ್ನು ಕಾಣಬಹುದು.

ಈ ದೇವಸ್ಥಾನದಲ್ಲಿ ಒಂದು ಅಪೂರ್ವ ವಿಶೇಷವನ್ನು ಕಾಣಬಹುದು. ಎರಡು ಗರ್ಭಗೃಹಗಳುಳ್ಳ ಹೊಯ್ಸಳೇಶ್ವರ ದೇವಾಲಯವು ಅತ್ಯದ್ಭುತವಾದ

ಕಲಾ ವೈಭವದಿಂದ ವಿರಾಜಿಸುತ್ತಿದೆ ಎರಡು ಗರ್ಭಗೃಹಗಳಲ್ಲೂ ವಿಷ್ಣು ವರ್ಧನ ಹೊಯ್ಸಳೇಶ್ವರ ಅಥವಾ ಹೊಯ್ಸಳೇಶ್ವರ ಮತ್ತು ಶಾಂತಳೇಶ್ವರ ಎಂಬ ಹೆಸರಿನ ಲಿಂಗವು ಪ್ರತಿಷ್ಠಿತವಾಗಿದೆ. ಎರಡು ದೇವಾಲಯಗಳ ರಚನೆಯೂ ಪರಸ್ಪರ ಹೊಂದಾಣಿಕೆಗೆ ಅನುಕ್ರಮವಾಗಿಯೇ ಇದೆ. ಹೇಗೆಂದರೆ ಪ್ರತ್ಯೇಕವಾದ ಗರ್ಭಗೃಹ, ಸುಖನಾಸಿ, ನವರಂಗ ಮಂಟಪ–ಮುಂದೆ ಎರಡೆರಡು ಎದುರು ಮಂಟಪಗಳಿವೆ. ಇವೆರಡು ದೇವಾಲಯಗಳನ್ನೂ ಸೇರಿಸುವಂತೆ ಮಧ್ಯೆ ಒಂದು ಪ್ರವೇಶ ಭಾಗ (Corridor) ಇದೆ. ಗರ್ಭಗೃಹದಲ್ಲಿರುವ ಲಿಂಗಕ್ಕೆ ಎದುರಾಗಿ ಮಂಟಪದಲ್ಲಿ ನಂದಿಯನ್ನು ಸ್ಥಾಪಿಸಲಾಗಿದೆ. ದಕ್ಷಿಣ ಭಾಗದ ದೊಡ್ಡಮಂಟಪದ ಪೂರ್ವಕ್ಕೆ ಸೂರ್ಯದೇವನಿಗೆ ಒಂದು ಗುಡಿ ಇದೆ.

ಇಲ್ಲಿನ ಎರಡು ನಂದಿಗಳು ಬಲು ದೊಡ್ಡದಾಗಿ ಬಹು ಚೆನ್ನಾಗಿ ಕೊರೆಯಲ್ಪಟ್ಟಿವೆ. ಇವುಗಳನ್ನು ನೋಡುವವರು ಕೂಡ ಸಲ್ಪ ಕಾಲನಿಂತು, ತಿರುಗಿ ಮರಳಿ ನೋಡಿ ಮುಂದುವರಿಯುವುದುಂಟು. ಅಂದಬಳಿಕ ಅಪೂರ್ವ ಕಲಾ ಕುಶಲತೆಯು ಅದ್ಭುತವಾಗಿ ಕೊರೆದ ವಸ್ತುಗಳಲ್ಲೂ ಕಾಣಬರುತ್ತದೆ.

ದೇವಸ್ಥಾನದ ಹೊರಭಾಗವು ಬೇಲೂರ ದೇವಾಲಯದಲ್ಲಿರುವಂತೆ ಪೂರ್ವಭಾಗದಲ್ಲಿ ಜಾಲಂಧ್ರದ ಕಿಡಕಿಗಳಿಂದ ಮುಚ್ಚಲ್ಪಟ್ಟದೆ. ಉಳಿದ ಭಾಗಗಳು ಕಲ್ಲಿನಿಂದ ಕೊರೆಯಲಾಗಿರುವ ಅದ್ಭುತವಾದ ವಿಗ್ರಹಗಳಿಂದ ಅಲಂಕೃತವಾಗಿವೆ. ಕೆಲವು ವಿಗ್ರಹಗಳು ೩ ಅಡಿ ಎತ್ತರವುಳ್ಳುದಾಗಿದ್ದು ಪೀಠದ ಮೇಲೆ ಸ್ಥಾಪಿತವಾಗಿ ಮೇಲ್ಭಾಗವು ಚಿತ್ರಯುಕ್ತವಾದ ಕಮಾನುಗಳಿಂದ ಕೂಡಿದ್ದಾಗಿದೆ ಹೀಗಾಗಿ ವಿಗ್ರಹಗಳಲ್ಲಿ ಕಾಣುವ ಸೌಂದರ್ಯವು ಶಾಸ್ತ್ರೋಕ್ತವಾಗಿದೆ. ಪ್ರತಿಯೊಂದು ವಿಗ್ರಹಕ್ಕೂ ಕೊಟ್ಟಿರುವ ಪ್ರಾಶಸ್ತ್ಯದಿಂದ ಪ್ರತಿ ಭಾಗದ ಹಾಗು ಒಟ್ಟಾರೆ ದೇವಾಲಯದ ಸೌಂದರ್ಯಕ್ಕೆ ಮೆರಗು ಕೊಟ್ಟಂತಾಗಿದೆ. ವಿಗ್ರಹಗಳಲ್ಲಿ ಲಕ್ಷ್ಮೀನಾರಾಯಣ, ಗಣಪತಿ, ವೇಣುಗೋಪಾಲ, ನಾರಸಿಂಹ, ಸರಸ್ವತಿ, ಬ್ರಹ್ಮ, ದುರ್ಗಾವತಾರ, ತ್ರಿವಿಕ್ರಮ, ವಾಮನ, ರಾವಣ, ಗರುಡ, ಅರ್ಜುನರ ವಿಗ್ರಹಗಳಲ್ಲದೆ ಸುಬ್ರಹ್ಮಣ್ಯ, ಉಮಾಮಹೇಶ್ವರರ ವಿಗ್ರಹಗಳೂ ಕೆತ್ತಲ್ಪಟ್ಟಿವೆ.. ಬ್ರಹ್ಮ, ವಿಷ್ಣು, ಮಹೇಶ್ವರರುಗಳನ್ನು ಅವರ ಪರಿವಾರದೊಂದಿಗೆ ಪ್ರದರ್ಶಿಸಲಾಗಿದೆ. ಇವೆಲ್ಲವುಗಳನ್ನು ವಿಶದವಾಗಿ ವರ್ಣಿಸಿದಲ್ಲಿ ವಿಶೇಷವಾಗಿ ಸ್ಥಳಾವಕಾಶಬೇಕು. ಮೇಲಾಗಿ

ಒಮ್ಮೆ ದೇವಾಲಯ ನೋಡಿರುವವರು ಕೆಲವು ಚಿತ್ರಗಳನ್ನು ನೆನಪಿಗೆ ತಂದು ಕೊಳ್ಳಬಹುದು.

ಸಂಕ್ಷೇಪವಾಗಿ ವಿವರಿಸುವುದಾದರೆ ಪೂರ್ವದಲ್ಲಿ-(೧)ಶ್ರೀಕೃಷ್ಣನ ಬಾಲ ಲೀಲೆಗಳು (೨) ಹೊಯ್ಸಳರು ವಿಷ್ಣುವನ್ನೂ, ಶಿವನನ್ನೂ ಒಟ್ಟಿಗೆ ಪೂಜೆ ಮಾಡುತ್ತಿರುವುದು (೩) ಕೃಷ್ಣನಿಗೂ ಇಂದ್ರನಿಗೂ ಪಾರಿಜಾತ ವೃಕ್ಷಕ್ಕಾಗಿ ಹೋರಾಟ (೪) ಈಶ್ವರನ ದರ್ಬಾರು.

ಈಶಾನ್ಯದಲ್ಲಿ (North East)

(೧) ದೇವಸ್ಥಾನವನ್ನು ಕಟ್ಟಿಸಿದ ದೊರೆಯ ದರ್ಬಾರು
(೨) ದೇವಾಸುರರು ಕ್ಷೀರ ಸಮುದ್ರವನ್ನು ಮಂದರ ಪರ್ವತಕ್ಕೆ ವಾಸುಕಿಯನ್ನು ಕಟ್ಟಿ ಮಥನ ಮಾಡುತ್ತಿರುವುದು.
(೩) ಶಿವಪಾರ್ವತಿಯರ ದರ್ಬಾರು.
(೪) ಬಲಿಚಕ್ರವರ್ತಿಯು ವಾಮನಾವತಾರಮಾಡಿದ ವಿಷ್ಣುವಿಗೆ ಭೂಮಿದಾನ ಮಾಡುತ್ತಿರುವುದು.

ಆಗ್ನೇಯದಿಕ್ಕು (South East)

ಇಲ್ಲಿ ಶಿವನ ನೃತ್ಯವು ಬಾಗಿಲ ಮೇಲಿನ ಚೌಕಟ್ಟಿನಲ್ಲಿ ನೋಡಲು ಸೊಗಸಾಗಿದೆ—ಇದೇ ಭಾಗದಲ್ಲಿ ಮಹಾಭಾರತ ಯುದ್ಧವನ್ನು ಕೊರೆಯ ಲಾಗಿದೆ. ದಕ್ಷಿಣದ ಬಾಗಿಲು ಬಹು ಚೆನ್ನಾಗಿ ಕೊರೆಯಲ್ಪಟ್ಟಿದೆ ಇಲ್ಲಿ ಪರ ಶಿವನು ಅಂಧಕಾಸುರನ ಶರೀರದ ಮೇಲೆ ನೃತ್ಯ ಮಾಡುವುದನ್ನು ಭಯಾನಕ ವಾಗಿ ಕೆತ್ತಲಾಗಿದೆ.

ನೈಋತ್ಯ (South West)

ಭೈರವ, ಅರ್ಜುನ ಮತ್ಸ್ಯಯಂತ್ರ ಭೇದಿಸುವುದು, ಕೃಷ್ಣನು ಕೊಳ ಲೂದುವುದು, ಸರಸ್ವತಿ ನೃತ್ಯಮಾಡುವುದು, ಇಂದ್ರ ಶಚಿಯರು ಆನೆಯ ಮೇಲೆ, ಕೃಷ್ಣನು ಗೋವರ್ಧನಗಿರಿ ಎತ್ತುತ್ತಿರುವುದು, ಮಹಾ ವಿಷ್ಣುವು ವರಾಹಾವ ತಾರ ಮಾಡಿ ಭೂದೇವಿಯನ್ನು ರಕ್ಷಿಸುತ್ತಿರುವುದು, ದುರ್ಗಾದೇವಿಯು ಮಹಿಷಾಸುರನೊಡನೆ ಹೋರಾಡುತ್ತಿರುವುದು.

ಪಶ್ಚಿಮದಲ್ಲಿ —

ಪ್ರಹ್ಲಾದನು ಹಿರಣ್ಯಕಶಿಪುವಿನ ಹಿಂಸೆಯಿಂದ ರಕ್ಷಿಸಲ್ಪಟ್ಟ (ವಿಷ್ಣುವು ನರಸಿಂಹಾವತಾರಮಾಡಿ) ದೃಶ್ಯ

ದ್ರೌಪದಿಯ ಸೇಡು–ಭೀಮನಿಂದ ದುಶ್ಯಾಸನನ ವಧೆ.

ತ್ರಿವಿಕ್ರಮಾವತಾರ

ವಾಯುವ್ಯ (North West)ದಲ್ಲಿ

(೧) ಅಭಿಮನ್ಯುವು ಕೌರವರ ಚಕ್ರವ್ಯೂಹವನ್ನು ಭೇದಿಸುತ್ತಿರುವುದು.

(೨) ರಾವಣನು ಕೈಲಾಸನನ್ನು ಎತ್ತುತ್ತಿರುವುದು.

(೩) ನೃತ್ಯಮಾಡುವ ಗಣೇಶ.

(೪) ಭೂದೇವಿ.

ಮೇಲ್ಭಾಗದಲ್ಲಿ—

(೧) ಗಜೇಂದ್ರ ಮೋಕ್ಷ

(೨) ಪಾರಿಜಾತಾಪಹರಣ–ಇಂದ್ರಶಚಿಯರು ಕೃಷ್ಣ ಸತ್ಯಭಾಮೆಯರೊಡನೆ ಹೋರಾಟಕ್ಕೆ ನಿಂತಿರುವುದು.

(೩) ಕಿರಾತನ ವೇಷದ ಶಿವನು ಅರ್ಜುನನೊಡನೆ ಹೋರಾಡುವುದು.

(೪) ರಾಮನು ಸಪ್ತತಾಳೆಯಮರದ ಮೂಲಕ ವಾಲಿಯನ್ನು ವಧಿಸುವುದು ಸುಗ್ರೀವನಿಗೆ ಪಟ್ಟಕಟ್ಟುವುದು. ಹನುಮಂತನಿಗೆ ರಾಮನು ಸಿತಾದೇವಿಯ ನೆನಪಿಗೆ ಉಂಗುರ(ಮುದ್ರಿಕಾ) ದಯಪಾಲಿಸುತ್ತಿರುವುದು.

ಈ ಪ್ರಕಾರವಾಗಿ ದೇವಾಲಯದ ಹೊರಭಾಗವೆಲ್ಲಾ ದಶಾವತಾರಗಳ ತ್ರಿಮುರ್ತಿಗಳು, ಇಂದ್ರಾದಿ ದೇವತೆಗಳು, ರಾಮಾಯಣ ಮಹಾಭಾರತದ ಪ್ರಸಿದ್ಧ ಪುರುಷರುಗಳ ಚಿತ್ರಗಳು, ಸರಸ್ವತಿ, ದುರ್ಗಾ, ಉಮಾಮಹೇಶ್ವರೀ ಮುಂತಾದ ಶಕ್ತಿ ದೇವತೆಗಳಿಂದಲೂ ಕೂಡಿ ಒಟ್ಟಾರೆ ನೋಟವು ಸ್ವರ್ಗೀಯವಾಗಿ ಕಾಣಬರುತ್ತದೆ.

ಇದೇ ದೇವಸ್ಥಾನದ ಆವರಣದಲ್ಲಿ ದೊಡ್ಡ ಗಣಪತಿಯ ವಿಗ್ರಹವಿದೆ ಇದರ ಸುತ್ತಲೂ ಪಕಾರದಲ್ಲಿ ದೊರೆತಿರುವ ಕೆಲವು ವಿಗ್ರಹಗಳನ್ನು ಇಡಲಾಗಿದೆ.

ಈ ದೇವಸ್ಥಾನದಲ್ಲಿ ಕಾಣಬರುವ ವೈವಿಧ್ಯತೆ (ನಕ್ಷೆ) ಮತ್ತು ವಿವರಗಳನ್ನು ಮತ್ತೆಲ್ಲೂ ಕಾಣಲಾಗುವುದಿಲ್ಲವೆಂತಲೂ ಅಭಿಪ್ರಾಯ ಪಟ್ಟಿರುತ್ತಾರೆ. ಅವರ ಮಾತಿನಲ್ಲೇ ಉದಹರಿಸಬಹುದಾದರೆ "All that is wild in humam baithaor warm in humam fealing is found portrayed on these"

—*Fergusson*

## ಕೇದಾರೇಶ್ವರ ದೇವಸ್ಥಾನ

ಈ ದೇವಾಲಯವು ಹಳೇಬಿಡಿನಲ್ಲಿರುವ ಎರಡನೆಯ ಪ್ರಾಮುಖ್ಯವಾದ ಕಲಾಕಟ್ಟಡ. ರಚನಾ ಕೌಶಲ್ಯದಲ್ಲಿ ವಿಶೇಷವಾಗಿ ಹೊಯ್ಸಳೇಶ್ವರ ದೇವಾಲಯುವನ್ನೇ ಹೋಲುತ್ತದೆ.

ದೋರಸಮುದ್ರ ಪಟ್ಟಣವು ವಿಷ್ಣುವರ್ಧನನ ಕಾಲದಿಂದಲೂ ದಿನೇ ದಿನೇ ಅಭಿವೃದ್ಧಿಗೆ ಬಂದಿತು. ರಾಜ್ಯವು ವಿಸ್ತರಿಸಿದುದು ಮಾತ್ರವಲ್ಲದೆ ಆಂತರಿಕವಾಗಿ ರಚನಾತ್ಮಕ ಕೆಲಸಗಳು ನಡೆದವು. ವಿಷ್ಣುವರ್ಧನನ ಮೊಮ್ಮಗನಾದ ೨ನೆಯ ವೀರ ಬಲ್ಲಾಳನ ಕಾಲದಲ್ಲಿ ವಿಶೇಷ ಹೆಸರುವಾಸಿಯಾಯಿತು. ಕ್ರಿ. ಶ ೧೨ ನೆಯ ಶತಮಾನದ ಕಡೆಯ ಭಾಗ ಮತ್ತು ೧೩ ನೆಯ ಶತಮಾನದ ೨೦ ವರುಷಗಳಲ್ಲಿ ( ಕ್ರಿ. ಶ ೧೧೭೧—೧೨೨೦ ರ ವರೆಗೆ ಆಳ್ವಿಕೆ ) ತನ್ನ ಮತ್ತು ಕಿರಿಯ ಪಟ್ಟದರಸಿಯಾದಅಭಿನವ ಕೇತಲಾದೇವಿಯುವರಿಂದ ಕಟ್ಟಿಸಲ್ಪಟ್ಟಿತೆಂದು ಹಳೇಬೀಡು ೧೧೫ನೆ ಅಂದರೆ ಕೇದಾರೇಶ್ವರ ದೇವಸ್ಥಾನದಲ್ಲಿ ಉತ್ತರಕಡೆ ಇರುವ ಶಾಸನದಿಂದ ತಿಳಿಯುಬರುತ್ತದೆ. ಆ ಶಾಸನದ ೩ ನೆಲ್ಲೈನಿನಿಂದಾ ಈ ರೀತಿ ಇದೆ 'ಆ ವಿನಯಾದಿತ್ಯ ಭೂಪತಿಗಂ ಕೆಳೆಯಬರಸಿಗಂ ಪುಟ್ಟಿದ ನೆರಿಯಂಗ ನೃಪ | ಆತನ ಮಗ ಬಿಟ್ಟಿದೇವ ಆ ನೃಪನ ಮಗ ನಾರಸಿಂಹದೇವ | ಆ ಭೂಪತಿಯ ಮಗ ವೀರಬಲ್ಲಾಳ ದೇವಂಗಂ ಪದ್ಮಲ ಮಹಾದೇವಿರಿಗಂ ಪುಟ್ಟಿದ ಪ್ರತಾಪ ಚಕ್ರವರ್ತಿ ವೀರ

ನಾರಸಿಂಹ ದೇವನು ತನ್ನ ಪ್ರಥಮ ರಾಜ್ಯದಲ್ಲಿ। ಮುಂನ ತಮ್ಮಯ್ಯ ಬಲ್ಲಾಳ ದೇವನು ತನ್ನ ಕಿರಿಯರಸಿ ಅಭಿನವ ಕೇತಲ ದೇವಿಯವರೇ ಮಾಡಿಸಿದ ಧರ್ಮ ಶ್ರೀಕೇದಾರೇಶ್ವರ ದೇವರ ಅಮೃತ ಪಡಿ ಅಂಗ ಭೋಗ ರಂಗ ಭೋಗ ನಿತ್ಯನೈಮಿತ್ತಿಕ ಪರ್ಬ್ಬಂಗಳಿಗಂ । .......

ಎಂದು ಮುಂದುವರಿದ ಶಾಸನದಲ್ಲಿ–ಮಾವಿನಕೆರೆ, ಮಲ್ಲಿಗವಾಳು, ಕೆರಗೋಡಿ, ಹಾಲವಾಗಿಲು, ಬಳ್ಳಿಯಕೆರೆ, ಕಡುದುರವಳ್ಳಿ, ಕುಂದೂರು ಇಂತೀಸ್ಥಳಂಗಳನು ದತ್ತಿಯಾಗಿ ವೀರನಾರಸಿಂಹದೇವನು ಕೊಟ್ಟ ನೆಂದು ಗೊತ್ತಾಗುತ್ತದೆ.

ದೇವಸ್ಥಾನವು ಎತ್ತರವಾದ ಜಗುಲಿಯ ಮೇಲೆ ನಿರ್ಮಿಸಲ್ಪಟ್ಟು ಕೆಳಗಿನಿಂದಾ ಮೇಲ್ಭಾಗದ ವರೆಗೂ ಆನೆಯಸಾಲು, ಕುದರೆಯನ್ನೇರಿದ ಸವಾರರು, ಸಿಂಹಗಳು, ಮಕರಗಳು, ಹಂಸಗಳು, ಲತೆಗಳು, ರಾಮಾಯಣ, ಮಹಾಭಾರತ ಮತ್ತು ಭಾಗವತದ ಕಥೆಗಳು ಇವುಗಳಿಗೆ ಸಂಬಂಧ ಪಟ್ಟ ಚಿತ್ರಗಳಿಂದ ಅಲಂಕೃತವಾಗಿದೆ.

ಈ ದೇವಸ್ಥಾನದಲ್ಲಿ ಈಗ ಪೂಜೆ ನಡೆಯುತ್ತಿಲ್ಲ. ಕೆರೆಗೆ ಅತಿ ಸಮೀಪವಾಗಿರುವುದನ್ನು ಹೊಯ್ಸಳೇಶ್ವರ ದೇವಾಲಯದ ಆವರಣದಿಂದಲೇ ನೋಡಬಹುದು.

ಇದೇ ದೇವಸ್ಥಾನದ ವಿಚಾರವಾಗಿಯೂ ಫರ್ಗುಸನ್ ಮಹಾಶಯನು ತನ್ನ ಅಮೋಘವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾನೆ. ಈ ನಮೂನೆಯ ಅಂದರೆ ಚಾಲುಕ್ಯರ ವಾಸ್ತುಶಿಲ್ಪದ ಕಟ್ಟಡಗಳಲ್ಲೆಲ್ಲಾ ಅತ್ಯಂತ ಉತ್ತಮ ತರಹೆಯ ನಮೂನೆಯದಾಗಿರುತ್ತೆ.

"One of the most exquisite specimens of Chalukyan Architecture in existence and one of the most typical. If it were possible to illustrate this temple in anything like completeness there is probably nothing in India which would convey a better idea of what its architects were capable of accomplishing." ಸಂಕ್ಷೇಪದಲ್ಲಿ ತಿಳಿಸುವುದಾದರೆ ಮಾತಿಗಿಂತ ಕೃತಿ ಮಿಗಿಲಾದುದು. ವರ್ಣನೆ ಕಡಿಮೆಯಾದರೂ ನೈಜ

ಸ್ವರೂಪಕ್ಕೆ ಕುಂದುಬಾರದು. ಈಗ್ಗೆ ೪೦ ವರುಷಗಳ ಹಿಂದೆ ಕೆಲವು ಭಾಗ ಕುಸಿದು ಬಿದ್ದಿದ್ದರೂ ಜೀರ್ಣೋದ್ಧಾರದಿಂದ ಹಿಂದಿನ ಸ್ಥಿತಿಗೆ ಬಂದಿಲ್ಲ.

## ಕೆಲವು ಚಿತ್ರಗಳು

ಹೊಯ್ಸಳೇಶ್ವರ ದೇವಾಲಯದಲ್ಲಿ ಮತ್ತು ಕೇದಾರೇಶ್ವರ ದೇವಾಲಯದಲ್ಲಿ ಗಮನಿಸಬೇಕಾದ ಕೆಲವು ವಿಗ್ರಹಗಳಿವೆ.

ದಕ್ಷಿಣಭಾಗಕ್ಕಿರುವ ಹೊಯ್ಸಳೇಶ್ವರ ದೇವಾಲಯದ ಎದುರಿಗೆ ನಂದಿಯೂ ಹಿಂಭಾಗದಲ್ಲಿ ಸೂರ್ಯದೇವನೂ ಪಶ್ಚಿಮಾಭಿಮುಖವಾಗಿ ನಿಂತಿರುವಂತೆ ಸ್ಥಾಪಿಸಲಾಗಿದೆ.

ಪಶ್ಚಿಮ ಭಾಗದಲ್ಲಿ ಗಾಯಿತ್ರಿದೇವಿಯು ಕೈಯ್ಯಲ್ಲಿ ಜಪಸರ ಹಿಡಿದಿರುವುದನ್ನು ನೋಡಬಹುದು. ಒಂದುಕಡೆ ಜ್ವಾಲಾನರಸಿಂಹನ ವಿಗ್ರಹವಿದೆ. ಜ್ವಾಲೆಯನ್ನು ಚೆನ್ನಾಗಿ ಕೊರೆಯಲಾಗಿದೆ. ಮತ್ತೊಂದು ಕಡೆ ಒಂದು ಕಪಿಯು ಸೀರೆಯನ್ನು ಎಳೆಯುತ್ತಾ ಇದೆ ಎಂತಲೂ ಪುನಃ ಹೆಂಗಸು ಎಳೆದುಕೊಳ್ಳುತ್ತಿರುವಂತೆಯೂ ಇದೆ. ವಿವರಣೆ ನಿಜವೆನಿಸುತ್ತದೆ. ಪ್ರೇಕ್ಷಕರ ಗಮನ ಇಲ್ಲಿಗೇ ನಿಲ್ಲಬಾರದು. ಪ್ರದಕ್ಷಿಣ ಮಾಡಕೊಂಡು ಬರುವಾಗ ಕೊನೆಯಲ್ಲಿ ದಕ್ಷಿಣದ ಗೋಡೆಯ ಮೇಲೆ ರಾವಣನು ಕೈಲಾಸವನ್ನು ಎತ್ತುತ್ತಿರುವ ಚಿತ್ರದಲ್ಲಿ ಕಡಲೆ ಕಾಳಿನಷ್ಟು ಬಸವನನ್ನೂ ಅವರೆ ಕಾಳಿನಷ್ಟು ಆನೆಯನ್ನೂ ಶಿಲ್ಪಿಯು ಮಾಡಿರುತ್ತಾನೆ.

ಕೇದಾರೇಶ್ವರ ದೇವಾಲಯದಲ್ಲೂ ರಾಮಾಯಣ-ಮಹಾಭಾರತದ ಕಥೆಗಳಿಗೆ ಸಂಬಂಧಿಸಿದ ಚಿತ್ರಗಳಿವೆ. ದುರ್ಗಾನೃತ್ಯ, ಮೋಹಿನೀನೃತ್ಯ ಮತ್ತು ಭೈರವನೃತ್ಯ, ಕಾಳಿಯನೃತ್ಯ ಇವುಗಳಲ್ಲದೆ-ಶೃಂಗಾರದಲ್ಲಿ ತೊಡಗಿರುವ ಹೆಂಗಸು, ರತಿ ಮನ್ಮಥ, ತ್ರಿವಿಕ್ರಮ, ಬಲಿ ಮತ್ತು ವಾಮನ ಈ ವಿಗ್ರಹಗಳೂ ದೊಡ್ಡದಾಗಿ ಕೆತ್ತಲ್ಪಟ್ಟಿವೆ. ಬೇಲೂರಿನ ದೇವಾಲಯದ ವಿಗ್ರಹಗಳಿಗಿಂತ ಇಲ್ಲಿನ ವಿಗ್ರಹಗಳು ದೊಡ್ಡ ದೊಡ್ಡ ಸೈಜಿನವುಗಳಾಗಿವೆ. ಅಲ್ಲಿ ಕಾಣದವುಗಳನ್ನು ಇಲ್ಲಿ ನೋಡಬಹುದು.

ಕೆಲವು ವಿಗ್ರಹಗಳು, ಕಲ್ಲು ಚಪ್ಪಡಿಗಳು ಭಿನ್ನವಾಗಿರುವುದನ್ನು ಹೊಯ್ಸಳೇಶ್ವರ ದೇವಾಲಯದ ಆವರಣದ ಎಡಭಾಗದಲ್ಲಿ ಹಾಕಿರುತ್ತಾರೆ.

ಅವುಗಳಲ್ಲಿ ಯಮನು ಕೋಣನ ಮೇಲೆ ಆಸನಾರೂಢನಾಗಿರುವುದೂ ಇದೆ. ಇದನ್ನು ಕೆತ್ತಿರುವ ಕಲ್ಲು ಚಪ್ಪಡಿ ಸ್ವಲ್ಪ ಭಿನ್ನವಾಗಿದೆ. ದೇವಸ್ಥಾನದ ಒಳಭಾಗದಲ್ಲಿ, ಹೊರಭಾಗದಲ್ಲಿ, ಅಲ್ಲಲ್ಲೆ ನಿರ್ಮಿಸಲಾಗಿರುವ ಚಿಕ್ಕ ಗುಡಿಗಳಲ್ಲಿ ಯಾವ ವಿಗ್ರಹಗಳೂ ಇಲ್ಲ. ಹೊರಭಾಗದ ದ್ವಾರಪಾಲಕರುಗಳ ಅಂಗಗಳನ್ನು ಭಿನ್ನಮಾಡಿರುತ್ತಾರೆ. ಎಷ್ಟೋ ವಿಗ್ರಹಗಳು ಭಿನ್ನವಾಗಿವೆ. ಆದರೆ ಉಳಿದಿರವಷ್ಟು ವಿಗ್ರಹಗಳಲ್ಲಿ, ದೇವಾಲಯದ ಕಲ್ಲು ಭಾಗಗಳನ್ನು ಜೋಡಿಸಿರುವುದರಲ್ಲಿ ತೋರಿಸಿರುವ ಕುಶಲತೆ ಅನುಪಮವಾದುದು.

ಮೇಲೆ ವಿವರಿಸಿರುವ ದೇವಾಲಯಗಳನ್ನು ರಾಷ್ಟ್ರೀಯ ಸ್ಮಾರಕಗಳೆಂದು ಪ್ರಸಿದ್ಧಪಡಿಸಿ ಅವುಗಳ ರಕ್ಷಣಾ ಯಾಜಮಾನ್ಯವನ್ನು ಕೇಂದ ಆರ್ಕಿಯಲಾಜಿಕಲ್ ಇಲಾಖೆಯವರು ೧೯೫೩ರ ಜುಲೈ ತಿಂಗಳಿಂದಲೇ ವಹಿಸಿದ್ದಾರೆ. ಆ ಅಧಿಕಾರಿಗಳಿಂದ ನೇಮಕವಾಗಿರುವ ಇಬ್ಬರು ಕಾವಲುಗಾರರು (ಬೇಲೂರಿನಂತೆಯೇ) ಅಲ್ಲೇ ಕಾದಿರುತ್ತಾರೆ. ಇದರಿಂದಾಗಿ ವಿಗ್ರಹಗಳನ್ನು ಜೋಪಾನ ಮಾಡಲು ಸಾಧ್ಯವಾಗಿದೆ. ಹಿಂದೆ ಎಷ್ಟೋ ವಿಗ್ರಹಗಳು ಸಾಗಿಹೋಗಿರುವುದಾಗಿ ಹೇಳಲಾಗಿದೆ.

## ಜೈನ ಬಸದಿಗಳು

ಶ್ರೀ ಹೊಯ್ಸಳೇಶ್ವರ ದೇವಾಲಯದ ಹಿಂದೆ ದಕ್ಷಿಣಕ್ಕೆ ಎರಡು ಫರ್ಲಾಂಗುಗಳ ದೂರದಲ್ಲಿ ಬಸ್ತಿಹಳ್ಳಿ ಎಂಬ ಗ್ರಾಮವಿದೆ. ಅಲ್ಲಿರುವ ಜೈನ ಬಸದಿಗಳು ಕೂಡ ದೇವಾಲಯಗಳಷ್ಟೇ ಪ್ರಾಮುಖ್ಯವಾಗಿ ಜಗಪ್ರಸಿದ್ಧವಾಗಿವೆ ಇವುಗಳಲ್ಲಿ ಶ್ರೀ ಆದಿನಾಥ ಬಸ್ತಿ, ಪಾರ್ಶ್ವನಾಥ ಬಸ್ತಿ ಮತ್ತು ಶಾಂತಿನಾಥ ಬಸ್ತಿಗಳು, ಶ್ರವಣಬೆಳಗೊಳದ ಬಸ್ತಿಗಳು–ಗೋಮಟೇಶ್ವರ ವಿಗ್ರಹದಂತೆ ರಾಷ್ಟ್ರೀಯಸ್ಮಾರಕಗಳಾಗಿ ಪರಿಗಣಿಸಲ್ಪಟ್ಟು ಕೇಂದ್ರದ ಆರ್ಕಿಯಲಾಜಿಕಲ್ ಇಲಾಖೆಯವರ ರಕ್ಷಣೆಗೆ ಒಳಪಟ್ಟಿವೆ. ಇಲ್ಲಿಗೂ ಕೂಡ ಪ್ರತಿದಿನವೂ ದೂರ ದೇಶಗಳಿಂದಲೂ ಭಾರತದ ಇತರ ಕಡೆಗಳಿಂದಲೂ ಪ್ರೇಕ್ಷಕರೂ ಭಕ್ತಾದಿಗಳೂ ಬಂದು ಹೋಗುತ್ತಲೇ ಇದ್ದಾರೆ.

ಇವುಗಳಲ್ಲಿ ಪಾರ್ಶ್ವನಾಥ ಸ್ವಾಮಿ ದೇವಸ್ಥಾನವು ಅತ್ಯಂತ ಉತ್ತಮ ಮಟ್ಟದ ಶಿಲ್ಪಕಲೆಯಿಂದ ಕೂಡಿದೆ. ದೇವಸ್ಥಾನದ ಮುಂಭಾಗದಲ್ಲಿ ೩೨

ಕಲ್ಲು ಕಂಭಗಳ ಮೇಲೆ ನಿರ್ಮಿಸಲಾಗಿರುವ ಮಂಟಪವಿದೆ. ಹೊರಭಾಗದಲ್ಲಿ ಕೆಲವು ಶಿಲ್ಪಕಲಾಚಾತುರ್ಯದಿಂದ ಕೂಡಿದ ವಿಗ್ರಹಗಳಿವೆ. ನವರಂಗದಲ್ಲಿ ಕೆಲವು ಸಣ್ಣ ಗುಡಿಗಳಿವೆ. ಹಿಂದೆ ಈ ಚಿಕ್ಕ ಗುಡಿಗಳಲ್ಲೆಲ್ಲಾ ೨೪ ತೀರ್ಥಂಕರರ ವಿಗ್ರಹಗಳನ್ನೊಳಗೊಂಡಿತ್ತೆಂದು ನಂಬಬಹುದಾಗಿದೆ ಭುವನೇಶ್ವರಿಯ ಆಧಾರವಾಗಿರುವ ೧೨ ಕರಿಯ ಕಲ್ಲು ಕಂಭಗಳನ್ನು ಸುಂದರವಾಗಿ ಕೆತ್ತಲಾಗಿದೆ. ಈ ಕಂಭಗಳಿಗೆ ಕೊಟ್ಟಿರುವ ಹೊಳಪಿನಲ್ಲಿ ಮುಖಬಿಂಬ ಚೆನ್ನಾಗಿ ಕಾಣಬರುತ್ತದೆ. ಅಮೃತಶಿಲೆಯೋಪಾದಿಯಲ್ಲಿ ನುಣುಪಾಗಿಯೂ ಶೀತಲವಾಗಿಯೂ ಇರುವ ಈ ಕಂಭಗಳ ಮೇಲೆ ಸ್ವಲ್ಪ ನೀರನ್ನು ಎರಚಿದಲ್ಲಿ ಕನ್ನಡಿಯಂತೆ ಹೊಳಪು ಬರುತ್ತದೆ ಇದೊಂದು ಅಪೂರ್ವ ಅನುಭವ; ಬೇರೆಲ್ಲಿಯೂ ಪಡೆಯಲಾಗುವುದಿಲ್ಲ.

ಪಾರ್ಶ್ವನಾಥಸ್ವಾಮಿಯ ವಿಗ್ರಹವು ೧೪ ಅಡಿ ಎತ್ತರವುಳ್ಳದಾಗಿ ಮೇಲ್ಭಾಗದಲ್ಲಿ ೭ ಹೆಡೆ ಸರ್ಪದಿಂದ ಅಲಂಕೃತವಾಗಿದೆ. ಮಂದಸ್ಮಿತ ಮುಖಭಾವದಿಂದ ಕೂಡಿದ್ದಾಗಿ ಯೋಗಮುದ್ರೆಯನ್ನು ಸೂಚಿಸುತ್ತದೆ ನಗ್ನವಾಗಿರುವ ಈ ವಿಗ್ರಹಕ್ಕೆ ಜೈನ ಅರ್ಚಕರು ಪ್ರತಿದಿನವೂ ಪೂಜೆ ಮಾಡುತ್ತಾರೆ.

ಇನ್ನೊಂದು ದೇವಸ್ಥಾನದಲ್ಲಿ ಆಸನಾರೂಢನಾಗಿ ಮಂಡಿಸಿರುವ ಆದಿನಾಥ ಸ್ವಾಮಿಯ ವಿಗ್ರಹವು ಸ್ವಲ್ಪ ಊನವಾಗಿರುವದರಿಂದ ಶಾಂತಿನಾಥ ಸ್ವಾಮಿಯ ದೇವಸ್ಥಾನದಲ್ಲಿ ಇಡಲಾಗಿದೆ.

ಇಲ್ಲಿಯ ವಾತಾವರಣದಲ್ಲಿ ಜಗತ್ತಿಗೆ ಶಾಂತಿಯೇ ಪರಮೋತ್ಕೃಷ್ಟವಾದುದೆಂದು ಬೋಧಿಸಿದ ಮಹಾವೀರ, ಬುದ್ಧ ಇವರ ನೆನಪು ಬರುತ್ತದೆ. ಇದೇ ಬಸದಿಗಳ ವಿಚಾರವಾಗಿ ಬೆಂಗಳೂರಿನ ಶ್ರೀ ಪಿ. ಸುಬ್ಬರಾಯ ಎಂಬವರು ಬರೆದ ಲೇಖನ ತಾಯಿನಾಡು ೩೦–೪–೫೩ ರಲ್ಲಿ ಅಚ್ಚಾಗಿದೆ. ಆ ಅಭಿಪ್ರಾಯಗಳು ಅರ್ಥಗರ್ಭಿತವಾಗಿವೆ.

"ಈ ಶಿಲ್ಪಕಲಾ ಪರಿಪೂರ್ಣವಾದ, ಅತ್ಯಂತ ಮನೋಹರವಾದ ಕಂಭಗಳೇ ಒಳದೇವಾಲಯದ ಸೌಂದರ್ಯ ಕಲಾವೈಭವವನ್ನು ಹೆಚ್ಚಿಸಿವೆಯೆನ್ನಬಹುದು. ಬಸದಿಗಳಲ್ಲಿ ಶಾಂತಿನಾಥ ಮತ್ತು ಪಾರ್ಶ್ವನಾಥ ಸ್ವಾಮಿಯ ವಿಗ್ರಹಗಳು ಸುಮಾರು ಹದಿನೈದಡಿ ಎತ್ತರದ ಭವ್ಯಾಕೃತಿಯಿಂದ ನಿಂತು

ಭಕ್ತಿರಸವನ್ನು ಶಾಂತಿರಸದೊಡನೆ ಸಮರಸವಾಗಿಸಿ, ಜಗತ್ತಿಗೆ ಬೋಧಿಸು ತ್ತಿರುವಂತೆ ಭಾಸವಾಗಿರುತ್ತದೆ. ಬಸದಿಗಳಲ್ಲಿ ಪೂಜೆ ಮಂಗಳಾರತಿಗಳ ಆಡಂಬರವಿಲ್ಲ. ಭಕ್ತಾದಿಗಳು ಬಂದು ಮಂಡಿಯೂರಿ ಮನಸಾ ಪ್ರಾರ್ಥಿಸು ವುದೇ ಪದ್ಧತಿ. ಇಲ್ಲಿನ ದೇವಾಲಯಗಳಲ್ಲಿ ಪೂಜಾದಿಗಳ ಬಾಹ್ಯಾಡಂಬರ ದಿಂದ ಭವ್ಯವಾದ ಕಲೆಗೆ, ಭಕ್ತಿಭಾವಸಮಾಧಿಗೆ ಎಲ್ಲಿ ವಿಘ್ನವಾದೀತೋ ಎಂಬಷ್ಟು ಪ್ರಶಾಂತ ಪ್ರತಿಭಾ ವಾತಾವರಣವು ಇಲ್ಲಿ ತುಂಬಿರುತ್ತದೆ.

ಇವೆಲ್ಲಕ್ಕಿಂತ ಹೆಚ್ಚಿನ ವಿಶೇಷವೆಂದರೆ ವಿಷ್ಣುವರ್ಧನ ರಾಜನು ರಾಮಾ ನುಜಾಚಾರ್ಯರನ್ನೇ ಕುಲಗುರುವಾಗಿ ಕಾಣುತ್ತಿದ್ದರೂ ಜೈನ ಬಸದಿಗಳನ್ನು ಕೂಡ ಕಟ್ಟಿಸಿದನೆಂದು ಪಾರ್ಶ್ವನಾಥ ಬಸ್ತಿಯ ಹೊರಗಡೆ ಗೋಡೆಗೆ ನೆಟ್ಟಿ ರುವ ೧೨೪ನೆ ಶಾಸನದಿಂದ ಗೊತ್ತಾಗುತ್ತದೆ ಅದರಲ್ಲಿ "ವಿಜಯ ಪಾರ್ಶ್ವ ತೀರ್ಥೇಶ್ವರಃ ಸಿದ್ಧಂ ನಮಃ ಎಂತಲೂ "ಹೊಯ್ಸಳೋರ್ವೀಶ ವಂಶಾಯ" ಎಂದೂ ಇದೆ. ಜೈನ ಮತಾವಲಂಬಿಯಾಗಿದ್ದಾಗಲೇ ಈ ಬಸದಿಗಳನ್ನೂ ಕಟ್ಟಿಸಿರಬೇಕೆಂದು ನಿರ್ಧರಿಸಬಹುದು.

## ಹೊಯ್ಸಳರ ಕಾಲದ ಶಾಸನಗಳು

ಹೊಯ್ಸಳರ ಕಾಲದ ಆಡಳಿತದ ವೈಖರಿಯನ್ನೂ ಶಿಲ್ಪಕಲಾವೈಭವವನ್ನೂ ತಿಳಿಯಲು ಆ ಕಾಲದ ಶಾಸನಗಳು ಆಧಾರವಾಗಿವೆ. ಅವರ ರಾಜ್ಯದ ಎಲ್ಲೆ ಯೊಳಗೆ ಅಲ್ಲಲ್ಲೇ ಇವು ದೊರೆತಿವೆ. ಅವುಗಳನ್ನೆಲ್ಲಾ ಸಂಗ್ರಹಿಸಿ ಅಚ್ಚುಹಾಕಿ ರುವ ಲೆವಿಸ್‌ರವರ ಕಾರ್ಯ ಸ್ತುತ್ಯವಾದುದು. ಹಾಸನ ಡಿಸ್ಟ್ರಿಕ್ಟಿನಲ್ಲಿರುವ ಶಾಸನಗಳನ್ನೆಲ್ಲಾ ಎಪಿಗ್ರಾಫಿಯಾ ಕರ್ನಾಟಿಕ-ವಾಲ್ಯೂಂ ೫ (ಭಾಗ ೨) (Epigraphia Carnatika—Vol v. (Part II) ಎಂಬ ಹೆಸರಿನಿಂದಾ ಶಾಸನಗಳ ಭಾಷೆಯಂತೇ ಅಚ್ಚು ಹಾಕಿರುತ್ತಾರೆ. ಇವುಗಳಲ್ಲಿ ವೀರಕಲ್ಲು ಗಳಲ್ಲಿ ಅಳವಡಿಸಿರುವ ಶಾಸನಗಳೂ, ಗದ್ದೆ, ಕೆರೆ, ಪಾಳು ದೇವಾಲಯ, ಹಾಲಿ ಪೂಜೆ ನಡೆಯುತ್ತಿರುವ ದೇವಾಲಯಗಳಲ್ಲಿ ದೊರೆತಿರುವ ಶಾಸನಗಳು ಕಲ್ಲುಗಳ ಮೇಲೆಯೂ, ಕೆಲವು ತಾಮ್ರದ ತಗಡಿನ ಮೇಲೆಯೂ ಕೆತ್ತಲ್ಪ ಟ್ಟಿವೆ ಇವುಗಳಲ್ಲೆಲ್ಲಾ ಬೇಲೂರು ತಾಲ್ಲೂಕಿನಲ್ಲಿ ದೊರೆತಿರುವ ಕೆಲವು ಮುಖ್ಯ ಶಾಸನಗಳ ವಿಚಾರವಾಗಿ ವಿವರಗಳನ್ನು ಸ್ಪಷ್ಟಪಡಿಸಲು ಯತ್ನಿಸಿ

ದ್ದಾಗಿರುತ್ತೆ. ಈ ಶಾಸನಗಳನ್ನು ಕೂಡ ರಾಷ್ಟ್ರೀಯ ಸ್ಮಾರಕಗಳೆಂದು ಪರಿಗಣಿಸಿ ಅವುಗಳ ರಕ್ಷಣೆಯನ್ನು ಕೇಂದ್ರ ಸರಕಾರದ ಪ್ರಾಚ್ಯಸಂಶೋಧನಾ ಇಲಾಖೆಯವರು ವಹಿಸಿದ್ದಾರೆ. ವೈಸ್ರಾಯರಾಗಿದ್ದ, ಇತಿಹಾಸ ಸಂಶೋಧನೆಯಲ್ಲಿ ವಿಶೇಷ ಆಸಕ್ತಿ ವಹಿಸುತ್ತಿದ್ದ ಲಾರ್ಡ್ ಕರ್ಜನ್‌ರವರ ಕಾಲದಲ್ಲೇ ಪ್ರಾಚೀನ ಸ್ಮಾರಕಗಳ ರಕ್ಷಣೆ ಬಗ್ಗೆ ಶಾಸನಗಳನ್ನು ಮಾಡಿ ಜಾರಿಗೆ ತರಲಾಯಿತು.

ಬೇಲೂರಿನಲ್ಲಿ ದೊರೆತಿರುವ ಶಾಸನಗಳಲ್ಲಿ ಸಂಪೂರ್ಣವಾಗಿ ಲಿಪಿಯನ್ನು ತೆಗೆದು ಅಚ್ಚು ಹಾಕಿರುತ್ತಾರೆ. ಇವುಗಳಲ್ಲಿ ವಿಶೇಷವಾಗಿ ಹಳಗನ್ನಡ ಮತ್ತು ಸಂಸ್ಕೃತ ಶಬ್ದಗಳು ಆದರಿಂದಾಗಿ ಪದ್ಯಗಳನ್ನೂ ಶ್ಲೋಕಗಳನ್ನೂ ಸಂದರ್ಭಾನುಸಾರವಾಗಿ ಅಳವಡಿಸಿರುತ್ತಾರೆ. ಪ್ರತಿಯೊಂದು ಶಾಸನದಲ್ಲಿಯೂ 'ಶುಭಮಸ್ತು' ಅಥವಾ 'ಸ್ವಸ್ತಿ' ಎಂದು ಆರಂಭವಾಗಿ ಕೆಲವು ಸಂದರ್ಭಗಳಲ್ಲಿ ಪ್ರಾರ್ಥನಾ ಶ್ಲೋಕಗಳನ್ನು ಸೇರಿಸಿರುತ್ತಾರೆ. ಶಾಸನವನ್ನು ಕೆತ್ತಿಸಿದ ಉದ್ದಿಶ್ಯವನ್ನು ವಿವರಿಸಲಾಗಿದೆ. ಮೇಲಾಗಿ ಈ ಶಾಸನಗಳಲ್ಲಿ ಕಾಣಬಹುದಾದ ಒಂದು ವೈಶಿಷ್ಟ್ಯವೇನೆಂದರೆ—ಹೇಗೆ ದೇವಾಲಯದ ಶಿಲ್ಪಕಲೆಯಲ್ಲಿ ಪ್ರಾಣಿವರ್ಗ, ಸಸ್ಯವರ್ಗ, ಮನುಷ್ಯವರ್ಗ, ದೇವಗಣ, ಲೋಕರಕ್ಷಕರು ಎಂದು ಒಂದಕ್ಕಿಂತ ಒಂದು —ಪಾತಾಳದಿಂದ ಸ್ವರ್ಗಲೋಕದವರೆಗಿನ ಉನ್ನತವಾದ ದೃಶ್ಯಗಳನ್ನು ಕಾಣಬಹುದೋ ಅದರಂತೆಯೇ ಇಲ್ಲಿ ಕೂಡ ರಾಜವಂಶಾವಳಿ—ಅವನ ಗುಣಗಳನ್ನು ವಿವರಿಸುವಾಗ ಅಷ್ಟದಿಕ್ಪಾಲಕರ ಹೆಸರುಗಳನ್ನು ಸ್ಮರಿಸಲಾಗಿದೆ. ಹೀಗಾಗಿ ಶಾಸನಗಳಲ್ಲಿ ಹೆಣೆದಿರುವ ಭಾವನೆಗಳು, ಉಪಮಾನ ಉಪಮೇಯಗಳು ಪದಲಾಲಿತ್ಯ ಇವುಗಳು ಶಾಸನಗಳ ಸೌಂದರ್ಯ ಹೆಚ್ಚಿಸಿವೆ. ಬಾಣನ ಸಂಸ್ಕೃತ ಕಾದಂಬರಿಯೋಪಾದಿಯಲ್ಲಿ, ಕೆಲವೆಡೆ ಜೈಮಿನಿಭಾರತ ಪದ್ಯಗಳ ಶೈಲಿಯಲ್ಲಿ ರಚಿತವಾಗಿ ಓದಲು ಬಹು ಚೆನ್ನಾಗಿವೆ. ಎಲ್ಲಕ್ಕಿಂತ ಮಿಗಿಲಾಗಿ ಮುಂದಿನ ಪೀಳಿಗೆಯವರು ಧರ್ಮಕಾರ್ಯವನ್ನು ಅನೂಚಾನವಾಗಿ ನಡೆಸಿಕೊಂಡು ಬರುವಂತೆಯೂ, ಅವುಗಳನ್ನು ದುರುಪಯೋಗಪಡಿಸಿದವರಿಗೆ ಆಗತಕ್ಕ ಮಹಾಪಾತಕವನ್ನೂ ವಿವರಿಸಿ ನೀತಿಭೋಧಕವಾಗಿವೆ. ಆ ಕಾಲವಲ್ಲಿ ಧರ್ಮದ ಬಗ್ಗೆ ಇದ್ದ ಆಸಕ್ತಿ ಮತ್ತು ಶ್ರದ್ಧೆ ಅನುಪಮವಾದುದು. ಇಂದಿನ ಕೆಲವು ಅಸ್ಥಿಭಾರ ಶಿಲೆಗಳಲ್ಲಿ ಸಂಕ್ಷೇಪ

ವಾಗಿ ಉದ್ದಿಶ್ಯವನ್ನು ಕೆತ್ತಿಸುವುದು ರೂಢಿಯಲ್ಲಿದೆ.

ಬೇಲೂರಿನ ೩ನೆ ಶಾಸನ ಅದೇ ದೇವಸ್ಥಾನದ ಪ್ರಾಕಾರದಲ್ಲಿ ಪುಷ್ಕರಣಿಗೆ ದಕ್ಷಿಣಕ್ಕೆ ನೆಟ್ಟಿರುವ ಕಲ್ಲಿನ ಮೇಲೆ ಕೆತ್ತಿದೆ.

''ಶ್ರೀ ಮತ್ರೈಲೋಕ್ಯಪೂಜ್ಯಾಯ ಸರ್ವಕಾರ್ಮಶುಸಾಕ್ಷಿಣೇ | ಫಲದಾಯ ನಮೋನಿತ್ಯಂ ಕೇಶವಾಯ ಶಿವಾಯಚ |' ಎಂದು ಆರಂಭವಾಗುವ ಶಾಸನದಲ್ಲೇ "ಶ್ರೀಮದ್ವೇಲಾಪುರಾಧೀಶಕೇಳವಸ್ಯ ಶಾಸನಂ" ಎಂದು ಉಲ್ಲೇಖಿತವಾಗಿದೆ.

"ಯಂ ಶೈವಾಸ್ಯಮುಪಾಸತೆ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ಬೌದ್ಧಾ ಬುದ್ಧ ಇತಿ, ಪ್ರಮಾಣಪಟವಃ ಕರ್ತೇತಿ ನೈಯಾಯಿಕಃ | ಅರ್ಹಶ್ಚೇತಿಹ ಜೈನ ಶಾಸನಮಿತಿ ಕರ್ಮೇತಿ ಮೀಮಾಂಸಕಾಃ | ಸೋಯಂ ವೋ ವಿದಧಾತು ವಾಂಛಿತ ಫಲಂ ಶ್ರೀ ಕೇಶವೇಶಸ್ಸದಾ||" ಎಂಬ ಶ್ಲೋಕದಲ್ಲಿ ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ' ಎಂಬ ಅರ್ಥ ಪ್ರತಿಪಾದಿತವಾಗಿದೆ.

ಬೇಲೂರಿನ ೫೮ನೆಯ ಶಾಸನದಲ್ಲಿ ಹೊಯ್ಸಳರ ವಂಶಾವಳಿ ಹಾಗು ಅವರು ಯದುಸಂತತಿಗೆ ಸೇರಿದವರೆಂಬ ಅಂಶವನ್ನು ಸ್ಪಷ್ಟಪಡಿಸಲಾಗಿದೆ.

" ಶ್ರೀ ಶೋದರಾಂಬುಜ ಭವಾದುದಿತೋ ತ್ರಿರತ್ರಿ ಜಾತೇಂದು ಪುತ್ರ ಬುಧೆ ಪುತ್ರ ಪುರೂರವಸ್ತಃ | ಆಯುಸ್ತತಸ್ಯ ನಹುಷೋ ನಹುಷಾದ್ಯಯಾತಿಃ | ತಸ್ಮಾದ್ಯದುರ್ಯದುಕುಲೇ ಬಹವೋ ಬಭೂವುಃ || ಖ್ಯಾತೇಷು ತೇಷು ನೃಪತಿಃ ಕಥಿತಃ ಕದಾಚಿತ್ ಕಶ್ಚಿದ್ವನೇ ಮುನಿವರೇಣ ಶಳಃ ಕರಾಳಂ ಶಾರ್ದೂಳಕಂ ಪ್ರತಿಹಿ ಪೋಯ್ಸಳ ಇತ್ಯತೋ ಭೂತ್ತಾಸ್ಯಾಭಿದಾ ಮುನಿವಚೋಪಿ ಚಮೂರ ಲಕ್ಷ್ಮ ||" ಈ ವಾಕ್ಯಗಳಲ್ಲಿ ಹೊಯ್ಸಳರು ಹೊಯ್ಸಳರಾದ ಬಗ್ಗೆ ಗೊತ್ತಾಗುತ್ತದೆ. ಇದೇ ಶಾಸನದಲ್ಲಿ ವಿಷ್ಣುವರ್ಧನ ರಾಜನ ಮತ್ತು ಪಟ್ಟಮಹಿಷಿಯಾದಿ ಶಾಂತಲಾದೇವಿಯನ್ನು ಕುರಿತು ಪ್ರಶಂಸಾತ್ಮಕ ವಾಕ್ಯಗಳಿವೆ. ಶಾಂತಳಾದೇವಿಯ ಬಗ್ಗೆ " ವಿಚಿತ್ರ ನರ್ತನ ಪ್ರವರ್ತನ ಪಾತ್ರಶಿಖಾಮಣಿಯುಂ | ಸಕಳ ಸಮಯ ರಕ್ಷಾಮಣಿಯುಂ | ಸಂಗೀತ ಸಂಗತ ಸರಸ್ವತಿಯುಂ | ಪತಿ ವಿನಯಾ ವಿದಿತಾರುಂಧತೆಯುಂ | ಸೌತಿಗಂಧಿ ಹಸ್ತಿಯುಂ || ಇತ್ಯಾದಿ ನಾಮಾವಳೀ ಪ್ರಶಸ್ತಿಯುಮೆನಿಸಿದ

ಶ್ರೀಮತ್ ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿಯರ್ವೆರಸು ಶ್ರೀಮನ್ಮಹಾ ಪಟ್ಟಣಂ ವೇಳಾಪುರದ ನೆಲೆವೀಡಿನೊಳ್ ಶ್ರೀಮದ್ವಿಷ್ಣುವರ್ಧನ ಪೊಯ್ಸಳ ದೇವರ್ ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರ್ದರ್ || ಈ ವಿವರಗಳಿಂದ ರಾಜ್ಯವನ್ನು ವಿಷ್ಣುವರ್ಧನನು ಪಾಲನೆ ಮಾಡುತ್ತಿದ್ದ ಅಂಶ ಸ್ಥಿರಪಡುತ್ತದೆ. ಬೇಲೂರಿನ ೭೧ ನೆಯ ಶಾಸನದಲ್ಲಿ ಕೂಡ ಅತ್ಯಂತ ಉತ್ತಮಮಟ್ಟದ ಉಪಮಾನ ಉಪಮೇಯಗಳಿವೆ.

ದಾನವನ್ನು ಆಚಂದ್ರಾರ್ಕವಾಗಿ ಪಾಲಿಸಲೆಂಬ ಧ್ಯೇಯದಿಂದ "ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ | ಷಷ್ಟಿವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ || ಸ್ವದತ್ತಾಂ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ||

ಅಲ್ಲದೆ ಆಳಿದರಾಜರುಗಳು ಕೂಡ ಅನೇಕ ಬಿರುದುಗಳನ್ನು ತಮ್ಮ ಹೆಸರಿನೊಡನೆ ಸೇರಿಸಿಕೊಳ್ಳುತ್ತಿದ್ದುದು ಆ ಕಾಲದಲ್ಲಿ ರೂಢಿಯಲ್ಲಿತ್ತು. ಇವುಗಳನ್ನೆಲ್ಲಾ ಬರೆಯಲು ಪ್ರತ್ಯೇಕ ಪುಸ್ತಕವೇ ಬೇಕಾದೀತು. ಶ್ರೀಮತ್ ತ್ರಿಭುವನಮಲ್ಲ ಭುಜಬಳ ವೀರಗಂಗ ವಿಷ್ಣುವರ್ಧನ ಪೊಯ್ಸಳ ದೇವರ್.

ಈ ರೀತಿಯಾಗಿ ಶಾಸನಗಳು ಬಹು ಸುಂದರವಾಗಿವೆ

---

## ಮಿಂಚಿನಬಳ್ಳಿಯಲ್ಲಿ ಕೆಲವು ಪ್ರಕಟನೆಗಳು.

# ಗೋಗ್ರಾಸ

ಲೇಖಕರು:- ನಾರಾಯಣ ಸಂಗಮ — ಬೆಲೆ:- ೧-೦-೦

“ಗೋ ಸಂಪತ್ತು ಪುರಾತನ ಕಾಲದಿಂದಲೂ ಭಾರತೀಯ ಸಂಸ್ಕೃತಿಯ ಹೆಗ್ಗುರುತಾಗಿದ್ದರೂ ಅದರ ಪಾಲನ ಪೋಷಣೆಯ ಕುರಿತು ಸಾಹಿತ್ಯ ಬೆಳೆದು ಬಂದಿದ್ದು ಮಾತ್ರ ಅಪರೂಪ. ಶ್ರೀ. ನಾರಾಯಣ ಸಂಗಮರ ಗೋಗ್ರಾಸವು ಈ ಕೊರತೆಯನ್ನು ಯಶಸ್ವಿಯಾಗಿ ತುಂಬಿ ತರುತ್ತಿದೆ. ಮನೆಯಲ್ಲಿ ಆಕಳನ್ನು ಸಾಕುವ ಪ್ರತಿಯೊಬ್ಬನೂ ಲಕ್ಷ್ಯದಲ್ಲಿರಿಸಬೇಕಾದ ಮತ್ತು ಅನುಸರಿಸಬೇಕಾದ ಅನೇಕ ಮಹತ್ವದ ಅಂಶಗಳನ್ನು ಇದರಲ್ಲಿ ಶಾಸ್ತ್ರೀಯವಾಗಿ ವಿವೇಚಿಸಲಾಗಿದೆ. ದಿವಂಗತ ಕೌಜಲಗಿ ಹಣಮಂತರಾಯರು ಈ ವಿಷಯದ ಬಗ್ಗೆ ಒಮ್ಮೆ ಏರ್ಪಡಿಸಿದ್ದ ಶಿಬಿರದ ಲಾಭ ಪಡೆದು ಕೊಂಡು ಶ್ರೀ. ಸಂಗಮರು ತಮ್ಮ ಸತತ ಪರಿಶ್ರಮದಿಂದ ಅದನ್ನು ಅರಗಿಸಿಕೊಂಡು ಓದು ಮತ್ತು ಅನುಭವಗಳಿಂದ ಅದನ್ನು ಬೆಳೆಸಿಕೊಂಡು ಅದರ ಫಲಸ್ವರೂಪವಾಗಿ ಈ ಹೊತ್ತಿಗೆಯನ್ನು ನೀಡಿದ್ದಾರೆ. ಈ ವಿಷಯದ ವಿವೇಚನೆಯನ್ನು ಕುರಿತು ಇನ್ನೊಂದು ಗ್ರಂಥವನ್ನು ಬರೆಯುವದಾಗಿ ಲೇಖಕರು ಹೇಳಿದರೂ ಸದ್ಯದ ಹೊತ್ತಿಗೆಯು ಸ್ವಯಂಪೂರ್ಣವಾಗಿರುವದು. ಪಶುಪಾಲನೆ ಅಥವಾ ಗೋ ಸಂರಕ್ಷಣೆಯಲ್ಲಿ ಆಸ್ಥೆಯುಳ್ಳ ಪ್ರತಿಯೊಬ್ಬ ಕನ್ನಡಿಗನಿಗೆ ‘ಗೋಗ್ರಾಸ’ವು ಅತ್ಯಂತ ಉಪಯುಕ್ತ ಕೈದೀವಟಿಗೆಯಾಗಿ ಪರಿಣಮಿಸುವದೆಂಬುದರಲ್ಲಿ ಸಂದೇಹವಿಲ್ಲ.

‘ಕರ್ಮವೀರ’ ಹುಬ್ಬಳ್ಳಿ

# ಮಾನವಪುತ್ರ-ಜೀಸಸ್

ಲೇಖಕರು:- ಖಲೀಲ ಗಿಬ್ರಾನ — ಅನುವಾದಕರು:- ‘ದೇವದತ್ತ’

ಬೆಲೆ:- ೨-೦-೦

ಈ ಪುಸ್ತಕದಲ್ಲಿ ವಿವರಿಸಿದ ಘಟನೆಗಳು ಕ್ರೈಸ್ತ ಸಮಾಜದ ಇತರ ಪುಸ್ತಕಗಳಂತೆ ಪರಸ್ಪರ ಸಂಬಂಧಿತವಾಗಿಲ್ಲವಾದರೂ ಕ್ರಿಸ್ತನ ಸ್ವರೂಪವನ್ನು ಪ್ರಕಟಿಸಲು ಸಾಕಷ್ಟು ಸಾಕ್ಷಿಯಾಗಿವೆ. ಪುಸ್ತಕದಲ್ಲಿ ಕ್ರಿಸ್ತನ ಹೊಗಳಿಕೆ ಮತ್ತು ತೆಗಳಿಕೆ, ಮಿತ್ರರು ಶತ್ರುಗಳು, ಅನುಯಾಯಿಗಳು ಮತ್ತು ವಿರೋಧಿಗಳು ಎಲ್ಲರ ಅಭಿಪ್ರಾಯವನ್ನು ಪ್ರಕಟಿಸಲಾಗಿದೆ. ಇದರಿಂದ ಕ್ರಿಸ್ತನ ಜೀವನದ ಬಗ್ಗೆಯೂ ಆತನು ಕಾರ್ಯ ಮಾಡುವಾಗ ಇದ್ದ ಪರಿಸ್ಥಿತಿಯ ಬಗ್ಗೆಯೂ ಹೆಚ್ಚಿನ ತಿಳುವಳಿಕೆಯುಂಟಾಗುವದು.

ಈ ಪುಸ್ತಕವು ಪ್ರಥಮವಾಗಿ ಕ್ರೈಸ್ತ ಧರ್ಮದ ಆಡಂಬರದ ಪ್ರಚಾರದಲ್ಲಿ ಸಿಲುಕಿದ ನಮ್ಮ ಕ್ರೈಸ್ತ ಬಾಂಧವರಿಗೂ ಅಸತ್ಯ ಪವಾಡ ಪ್ರಚಾರ ಮಾಡುವ ಕ್ರಿಸ್ತ ಪ್ರಚಾರಕರಿಗೂ ಶುದ್ಧ ಹೃದಯದಿಂದ ಉಚ್ಚ ತತ್ವಗಳನ್ನರಿಯುವ ಆಕಾಂಕ್ಷೆಯ ನಮ್ಮ ನಾಡಿಗರಿಗೂ ಬಹಳ ಉಪಯುಕ್ತವಿದ್ದು, ಮೊದಲನೆಯವರಿಗೆ ಆತ್ಮಶೋಧನೆಗೆ ನೆರವಾದರೆ, ಕೊನೆಯವರಿಗೆ ತತ್ವ ತಿಳಿವಿಗೆ ಸಹಾಯವಾಗುವದು.

‘ವಿಕ್ರಮ’ ಬೆಂಗಳೂರ